# ಉಮಾರಾವ್‌ರವರ ಕತೆ, ಕಾದಂಬರಿಯಲ್ಲಿ ಆಧುನಿಕತೆಯ ಸ್ವರೂಪ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)


ಅಧ್ಯಯನಕಾರರು

ನೇತ್ರಾವತಿ ಕೆ.ಆರ್.

ನೊಂ. ಸಂ. ಕೆ,ಯು.ಕೆ.ಎಸ್/೦೦೫೦೩

ಮಾರ್ಗದರ್ಶಕರು

ಡಾ. ಅಮರೇಶ ಎನ್.

ಸಹ ಪ್ರಾಧ್ಯಾಪಕರು








ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ -೫೮೩ ೨೭೬


೨೦೧೩

# ಉಮಾರಾವ್‌ರವರ ಕತೆ, ಕಾದಂಬರಿಯಲ್ಲಿ ಆಧುನಿಕತೆಯ ಸ್ವರೂಪ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)

ಅಧ್ಯಯನಕಾರರು

**ನೇತ್ರಾವತಿ ಕೆ.ಆರ್.**

ನೊಂ. ಸಂ. ಕೆ,ಯು,ಕೆ,ಎಸ್/೦೦೫೦೩

ಮಾರ್ಗದರ್ಶಕರು

**ಡಾ. ಅಮರೇಶ ಎನ್.**

ಸಹ ಪ್ರಾಧ್ಯಾಪಕರು



**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ –೫೮೩ ೨೭೬

೨೦೧೩

## ಪ್ರಮಾಣ ಪತ್ರ

**'ಉಮಾರಾವ್‌ರವರ ಕತೆ, ಕಾದಂಬರಿಯಲ್ಲಿ ಆಧುನಿಕತೆಯ ಸ್ವರೂಪ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ಅಮರೇಶ ಎನ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಈ ಸಂಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಇನ್ನಿತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಂಪಿ, ವಿದ್ಯಾರಣ್ಯ

ದಿನಾಂಕ : 30.07.13

ನೇತ್ರಾವತಿ. ಕೆ.ಆರ್.

**(ನೇತ್ರಾವತಿ ಕೆ.ಆರ್.)**

ಸಂಶೋಧನ ವಿದ್ಯಾರ್ಥಿನಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

## ದೃಢೀಕರಣ ಪತ್ರ

**ನೇತ್ರಾವತಿ ಕೆ.ಆರ್.** ಇವರು ನನ್ನ ಮಾರ್ಗದರ್ಶನದಲ್ಲಿ **'ಉಮಾರಾವ್‌ರವರ ಕತೆ, ಕಾದಂಬರಿಯಲ್ಲಿ ಆಧುನಿಕತೆಯ ಸ್ವರೂಪ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿದ್ದು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಸದರಿ ಸಂಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು, ಇದರ ಯಾವುದೇ ಭಾಗ ಮತ್ತು ವಿಷಯವನ್ನು ಯಾವುದೇ ಉದ್ದೇಶಕ್ಕೆ ಬಳಸಿಕೊಂಡಿಲ್ಲ ಮತ್ತು ಈ ಮೊದಲು ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಹಂಪಿ, ವಿದ್ಯಾರಣ್ಯ

ದಿನಾಂಕ : 30.7.13

**(ಡಾ. ಅಮರೇಶ ಎನ್)**
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

### ಪ್ರಸ್ತಾವನೆ

ಸಾಹಿತ್ಯವೆಂಬುದು ಭೂತಕಾಲದ ಗತ ಇತಿಹಾಸವಾಗಿ, ವರ್ತಮಾನದ ಕತೆಯಾಗಿ, ಭವಿಷ್ಯದ ಕನಸಾಗಿ ಮೂಡಿಬರುವ ಅಸಾಮಾನ್ಯ ಚಕ್ಷು ಗೋಚರವಾದ ನವಪರಿ ಪ್ರೇಕ್ಷಣೀಯ ನವ ಸೃಷ್ಟಿ. ಈ ನವ ಸೃಷ್ಟಿಯಲ್ಲಿ ನಮಗೆ ಕಾಣಿಸುವುದು ದೃಷ್ಟಿಗೋಚರವಾದ ಜಗತ್ತಿನಿಂದ ಭಿನ್ನವಾದ, ವಿಶಿಷ್ಟಮಯವಾದ ದೃಷ್ಟಿ ಒಂದರ್ಥದಲ್ಲಿ ಸಾಹಿತ್ಯ ನಮ್ಮ ನಿತ್ಯ ಜೀವನದ ಪ್ರತಿಬಿಂಬವೂ ಹೌದು! ಗತಿಬಿಂಬವೂ ಸಹ ಆಗಿದೆ. ನಮ್ಮೆಲ್ಲರ ಅರಿವಿಗೆ ಬಂದಿರುವಂತೆ ಬದುಕಿನಲ್ಲಿ ಸ್ಥಿತ್ಯಂತರಗಳು ತೀರ ಸಹಜ. ಮಾನವ ಬದುಕಿನ ಪ್ರತಿಬಿಂಬವಾದ ಸಾಹಿತ್ಯದಲ್ಲಿಯೂ ಇಂತಹ ಸ್ಥಿತ್ಯಂತರವಾಗಿರುತ್ತವೆ. ಕನ್ನಡ ಸಾಹಿತ್ಯವೂ ಈ ಮಾತಿಗೆ ಹೊರತಾದುದೇನಲ್ಲ.

ಸಾವಿರದೈನೂರು ವರ್ಷಕ್ಕೆ ಸಂಪದ್ಯುಕ್ತ ಸಾಹಿತ್ಯೇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವನ್ನು ಪ್ರಾಚೀನಯುಗ, ಮಧ್ಯಕಾಲೀನ ಯುಗ ಹಾಗೂ ಅರ್ವಾಚೀನ ಅಥವಾ ಆಧುನಿಕ ಅರ್ವಾಚೀನಯುಗವೆಂಬುದಾಗಿ, ಸ್ಥೂಲವಾಗಿ ವಿಭಜಿಸಿ ಗುರುತಿಸಬಹುದು. ಅಲ್ಲದೇ ಅರ್ವಾಚೀನ ಅಥವಾ ಆಧುನಿಕ ಕನ್ನಡ ಸಾಹಿತ್ಯವನ್ನು ಮತ್ತೆ ನವೋದಯ, ಪ್ರಗತಿಶೀಲ, ನವ್ಯ ಹಾಗೂ ನವೋತ್ತರ (ದಲಿತ ಬಂಡಾಯ) ಎಂಬ ವಿಭಾಗಗಳಲ್ಲಿ ಪ್ರತ್ಯೇಕಿಸಿ ಅಧ್ಯಯನ ನಡೆಸಬಹುದು.

ಹಲವಾರು ನೂತನ ಪ್ರಯೋಗ ಶಾಲೆಯಂತಿದ್ದ ನವೋದಯ ಸಾಹಿತ್ಯ ಸಂದರ್ಭ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲೂ ಐತಿಹಾಸಿಕವಾಗಿ ಮುಖ್ಯವಾದದ್ದು, ಹಾಗೂ ಅಧ್ಯಯನ ಯೋಗ್ಯವಾದದ್ದು ಆಗಿದೆ. ಬ್ರಿಟೀಷ್ ವಸಾಹತುಶಾಹಿಯ ಆಗಮನದಿಂದ ಉಂಟಾದ ವಿವಿಧ ಪ್ರತಿಕ್ರಿಯೆಗಳಲ್ಲಿ

ನವೋದಯ ಸಾಹಿತ್ಯ ಸಂಸ್ಕೃತಿಯ ಅವಿರ್ಭಾವವು ಒಂದಾಗಿದೆ. ಪಾಶ್ಚಾತ್ಯ ಪ್ರೇರಣೆಯಿಂದ ಅಖಿಲ ಭಾರತ ಮಟ್ಟದಲ್ಲಿ ಗತಿಸಿದ ಈ ಸಂದರ್ಭ ಒಂದಾಗಿದೆ. ಮೊದಲಿಗೆ ಬಂಗಾಲಿಯಲ್ಲಿ ಅನಂತರ ಹಿಂದಿ, ಮರಾಠಿ, ಗುಜರಾತಿ ಭಾಷೆಗಳಲ್ಲಿ ಅವತರಿಸಿ ಕನ್ನಡಕ್ಕೆ ಸ್ವಲ್ಪ ತಡವಾಗಿಯೇ ಬಂದಿತೆನ್ನಬಹುದು. ನವೋದಯ ಕಾಲದಲ್ಲಿ ಹೆಸರಿಗೆ ತಕ್ಕಂತೆ ಕನ್ನಡ ಸಾರಸ್ವತ ಪ್ರಪಂಚದಲ್ಲಿ ನೂತನದ ಉದಯ ಬೆಳಕು ಹರಿಯತೊಡಗಿತು. ಸುಶಿಕ್ಷಿತ ಸಂವೇದನೆಗಳಿಂದ ನವೋದಯ ಶಿಷ್ಟಸಾಹಿತ್ಯವನ್ನು ಸೃಷ್ಟಿಸುತ್ತಿದ್ದ ಮಾಸ್ತಿ, ಬೇಂದ್ರೆ, ಕುವೆಂಪು, ಕಾರಂತ, ಪುತಿನ ಮುಂತಾದ ಸಾಹಿತಿಗಳು ಜನರ ಅಭಿರುಚಿಯನ್ನು ತಿದ್ದುವಲ್ಲಿ, ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸಿದರು.

ಆದರೆ ಪುರುಷರು ತಮನ್ನು ಸಾಹಿತ್ಯ ಕ್ಷೇತ್ರಕ್ಕೆ ತೊಡಗಿಸಿಕೊಂಡಷ್ಟು ಸುಲಭವಾಗಿ ಮಹಿಳೆಯರಿಗೆ ಅದು ಸುಲಭ ಸಾಧ್ಯವಾಗಿರಲಿಲ್ಲ. ಕಾರಣ ಹೆಣ್ಣಿನ ಸ್ವಂತ ಭಾವನೆಗಳು, ಆಲೋಚನೆಗಳು, ಪುರುಷ ಹಿತಾಸಕ್ತಿಗಳ ನಿಯಂತ್ರಣಕ್ಕೆ ಒಳಗಾಗಿ ಆಕೆಯ ಭಾವನೆ ಆಲೋಚನೆಗಳೆಲ್ಲವೂ ನಾಲ್ಕು ಗೋಡೆಗಳ ಮಧ್ಯೆ, ಗಂಡನ ಸೇವೆ, ಮಕ್ಕಳ ಪಾಲನೆ, ಪೋಷಣೆ ಇತ್ಯಾದಿ ಸಂಗತಿಗಳಲ್ಲಿ ಕರಗಿ ಹೋಗಿದ್ದರೆ, ಜೊತೆಗೆ ಅವಳು ಸಂಪ್ರದಾಯವೆಂಬ ಸಂಕೋಲೆಯಲ್ಲಿ ಸಿಲುಕಿದ್ದಳು. ಇಂಥ ಸಂದರ್ಭದಲ್ಲಿ ಅಕ್ಷರ ಸಂಸ್ಕೃತಿಗೆ, ಮೊದಲ ಬಾರಿಗೆ ತಮ್ಮನ್ನು ತೆಗೆದುಕಕೊಂಡ ಹಲವಾರು ಮಹಿಳೆಯರು ಈ ಕಾಲದ ಸಾಹಿತ್ಯಕ್ಕೆ ಓದುಗರಾದರು, ಸಾಹಿತ್ಯ ರಚನೆಗೆ ತೊಡಗಿದರು. ಈ ಕಾಲದಲ್ಲಿ, ಬರಹದಲ್ಲಿ ಮೊದಲು ಕೈಹಾಕಿದ ಆಧುನಿಕ ಯುಗದ ಮಹಿಳೆಯರೆಂದರೆ ತಿರುಮಲಾಂಬ, ಕಲ್ಯಾಣಮ್ಮ, ಸರಸ್ವತಿಬಾಯಿ, ಎಂ.ಕೆ. ಇಂದಿರಾ, ಕೊಡಗಿನ ಗೌರಮ್ಮ, ಶ್ಯಾಮಲದೇವಿ, ತ್ರಿವೇಣಿ ಮುಂತಾದವರನ್ನು ಹೆಸರಿಸಬಹುದು.

ಮೊದಲಿಗೆ ಈ ಲೇಖಕಿಯರು ಶಿಕ್ಷಣವನ್ನು ಗಳಿಸಿಕೊಂಡ ಬಗೆಯಲ್ಲಿ ಈ ಕಾಲಕ್ಕೆ ಒಂದು ದೊಡ್ಡ ಪವಾಡವೆನಿಸಿತ್ತು. ಸ್ತ್ರೀಯರ ಶಿಕ್ಷಣದ ಬಗ್ಗೆ ಅತ್ಯಂತ ತಿರಸ್ಕಾರವಿದ್ದ ಸಂಪ್ರದಾಯಸ್ಥ ಪರಿಸರಗಳಲ್ಲಿ ಹಲಗೆ-ಬಳಪ ಹಿಡಿಯುವುದೇ ಈ ಲೇಖಕಿಯರ ಮೊಟ್ಟಮೊದಲ ಪ್ರತಿಭಟನಾ ವಿಧಾನವಾಗಿತ್ತು. ಸಾಹಿತ್ಯದ ಮೂಲಕ ಹಿಂದುಳಿದಿರುವ ಸ್ತ್ರೀ ಕುಲವನ್ನು ಎಚ್ಚರಿಸಿ ಮೇಲೆತ್ತಬೇಕು, ಅದಕ್ಕಾಗಿ ಬರಹವನ್ನು ಬಹು ಪ್ರಬಲವಾದ ಸಾಧನವಾಗಿಸಿಕೊಳ್ಳಬೇಕೆಂಬುದು ಇವರ ಏಕೈಕ ಧ್ಯೇಯವಾಗಿತ್ತು.

**ಅಧ್ಯಯನದ ಉದ್ದೇಶ ಮತ್ತು ಮಹತ್ವ**

ಉಮಾರಾವ್ ಅವರು ಸಮಾಜದ ವಿವಿಧ ವರ್ಗದ, ವಿವಿಧ ವಯೋಮಾನದ ಹೆಣ್ಣಿನ ಆಂತರಿಕ ಮನಸ್ಥಿತಿಯನ್ನು ಸಹಜವಾಗಿ ಮಂಡಿಸಿದ್ದಾರೆ. ಅನುಭವಕ್ಕೆ ವಯಸ್ಸಿನ ಮಿತಿ ಇರುತ್ತದೆ ಎಂಬುದು ಸಾಮಾನ್ಯ ತಿಳುವಳಿಕೆ. ಆದರೆ ಉಮಾರಾವ್ ಅವರು ವಯಸ್ಸಿಗೂ ಮೀರಿದ ಅನುಭವಗಳನ್ನು ತಮ್ಮ ಕೇಂದ್ರ ಪಾತ್ರಗಳು ಹಾಗೂ ಇತರ ಪಾತ್ರಗಳ ಮೂಲಕವಾಗಿ ವ್ಯಕ್ತಪಡಿಸಿದ್ದಾರೆ.

ಈ ಮುಖ್ಯ ಪಾತ್ರಗಳು ಸಮಸ್ಯೆಯ ಮಧ್ಯೆ ಸಂದರ್ಭದ ಸುಳಿಗೆ ಸಿಕ್ಕಿ ಮುಳುಗದೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಭಿನ್ನ ಸಂದರ್ಭಗಳಲ್ಲಿ ಪರಿಹಾರಗಳನ್ನು ಹೇಗೆ ಕಂಡುಕೊಂಡಿವೆ ಎಂಬುದನ್ನು ವಿಶ್ಲೇಷಿಸುವುದರ ಮೂಲಕ ಪಾತ್ರದ ವೈಶಿಷ್ಟತೆಯನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ.

ಕತೆಗಳು ರಚನೆಯಾಗಿ ಕೆಲವು ವರ್ಷಗಳಾದರೂ ಬದಲಾದ ಆಧುನಿಕ ಕಾಲದಲ್ಲಿ ಸ್ತ್ರೀಯರ ಪರಿಸ್ಥಿತಿಯಲ್ಲಿ ಹೆಚ್ಚಿನ ವ್ಯತ್ಯಾಸವೇನೂ ಆದಂತಿಲ್ಲ. ಸಂಪ್ರದಾಯಿಕ ಹಾಗೂ ಆಧುನಿಕತೆ ಈ ಎರಡರ ನಡುವೆ ಒಂದು ರೀತಿಯ ಸಂದಿಗ್ಧತೆಯ ಪರಿಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಇಂಥ ವೈರುಧ್ಯಗಳಿಗೆ ಸರ್ವಕಾಲಿನ ಪರಿಹಾರ ಮಾರ್ಗಗಳನ್ನು ಉಮಾರಾವ್ ಅವರ ಕತೆ, ಕಾದಂಬರಿಯಲ್ಲಿ ವ್ಯಕ್ತವಾಗಿವೆ.

ಹೆಣ್ಣಿನ ವಾಸ್ತವ ಚಿತ್ರಣ ದ್ವಿಮುಖ ನೀತಿಯನ್ನು ಕುರಿತ ವಿರೋಧವನ್ನು ಮನೋವಿಶ್ಲೇಷಣ ಸಿದ್ಧಾಂತದ ಹಿನ್ನೆಲೆಯಲ್ಲಿ ಮೂಡಿಬಂದ ಉದಾರವಾದಿ ನೆಲೆ, ಮಹಿಳೆಗೆ ವಿದ್ಯೆಯ ಅಗತ್ಯದ ಪ್ರತಿಪಾದನೆ, ಸಂಕ್ರಮಣಕಾಲದ ಮಹಿಳೆಯರ ಬದುಕಿನ ಕೆಲವು ವಿಶಿಷ್ಟ ಮುಖಗಳತ್ತ ಚೆಲ್ಲಿದ ಬೆಳಕು, ಸಂಬಂಧಿಸಿದಂತೆ ಸಾಮಾಜಿಕ, ಕೌಟುಂಬಿಕ ವಲಯಗಳಲ್ಲಿನ ಅನೇಕ ಜೀವ ವಿರೋಧಿ ನಿಲುವುಗಳನ್ನು ಕುರಿತು ಪ್ರತಿಭಟನೆ, ಮಹಿಳೆಯರ ವಿಶಿಷ್ಟ ಜೀವನ ಸಂದರ್ಭ ಮತ್ತು ಅನುಭವಗಳ ದರ್ಶನ ಇಂಥ ಅನೇಕ ಅಂಶಗಳನ್ನು ಉಮಾರಾವ್ ಅವರ ಸಾಹಿತ್ಯದಲ್ಲಿ ತನ್ನೊಡಲಿನಲ್ಲಿ ಮೈಗೂಡಿಸಿಕೊಂಡಿದೆ. ಹೀಗಾಗಿ ಮಹಿಳಾ ಸಾಹಿತ್ಯದಲ್ಲಿ ಉಮಾರಾವ್‌ರವರ ಸಾಹಿತ್ಯಕ್ಕೆ ಆಧುನಿಕ ಮಹತ್ವವಿರುವುದನ್ನು ಗುರುತಿಸುವ ಅಗತ್ಯವಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನದ ವ್ಯಾಪ್ತಿಯು ತುಂಬಾ ವಿಶಾಲವಾಗಿರುವುದರಿಂದ ಮತ್ತು ನನ್ನ ಎಂ.ಫಿಲ್ ಸಂಶೋಧನಾ ಪ್ರಬಂಧ ಕಿರು ದೃಷ್ಟಿಯಿಂದ ಮೂರು ಕಥಾಸಂಕಲನಗಳು, ಒಂದು ಕಾದಂಬರಿ, ಜೀವನ ಚರಿತ್ರೆಯನ್ನು ಆಯ್ಕೆ ಮಾಡಿಕೊಂಡು ಆಧುನಿಕತೆಯಲ್ಲಿ ಹೆಣ್ಣಿನ ವೈಶಿಷ್ಟ್ಯತೆಯ ನೆಲೆ ಗುರುತಿಸಲು ಅವರ ಪ್ರಾತಿನಿಧಿಕ ಕತೆ, ಕಾದಂಬರಿಯನ್ನು ವಿಶೇಷವಾಗಿ ನಾಯಕಿ ಪ್ರಧಾನವಾದ ಕತೆ, ಕಾದಂಬರಿಯ ಕಡೆ ಹೆಚ್ಚು ಗಮನಿಸಿ ಅದಕ್ಕನುಗುಣವಾಗಿ ಅಧ್ಯಯನವನ್ನು ಸ್ಥೂಲವಾಗಿ ಮಾಡಲಾಗುವುದು.

## ಅಧ್ಯಯನದ ವೈಧಾನಿಕತೆ

- ಕಥಾಸಾಹಿತ್ಯವನ್ನು ಅಧ್ಯಯನ ಮಾಡುವಾಗ ಇಂದಿನ ಮಹಿಳೆಯರ ಸಮಸ್ಯೆಗಳು, ಬಿಕ್ಕಟ್ಟುಗಳು, ಪರಿಹಾರಗಳನ್ನು ಕುರಿತು ಯೋಚಿಸುತ್ತಾ ಸಂಭವನೀಯ ಜಗತ್ತಿನಲ್ಲಿ ಮಹಿಳೆಯ ಸ್ಥಾನಮಾನಗಳನ್ನು ಗ್ರಹಿಸುವುದಕ್ಕೆ ಪ್ರಯತ್ನಿಸಲಾಗುವುದು.

- ಕಥಾಸಂಕಲನ ಮತ್ತು ಕಾದಂಬರಿಯಲ್ಲಿ ಆಧುನಿಕತೆಯ ಪ್ರಭಾವವಿರುವುದು ತಾತ್ವಿಕತೆಯ ಹಿನ್ನೆಲೆಯಲ್ಲಿ ಗುರುತಿಸಲಾಗುವುದು.

- ಕಥಾಸಂಕಲನದ ಕಡೆಗೆ ಹೆಚ್ಚು ಗಮನ ಕೊಡಲು ಪ್ರಯತ್ನಿಸಲಾಗುವುದು ಮತ್ತು ಲೇಖಕಿಯ ಅಭಿವ್ಯಕ್ತಿಯ ವಿಧಾನವನ್ನು ಶೋಧಿಸಲಾಗುವುದು.

# ಅಧ್ಯಾಯ – ೨

# ಕನ್ನಡ ಕತೆ, ಕಾದಂಬರಿ ಸಾಹಿತ್ಯಕ್ಕೆ ಮಹಿಳಾ ಲೇಖಕಿಯರ ಕೊಡುಗೆ

ಆಧುನಿಕ ಕನ್ನಡ ಸಾಹಿತ್ಯವೂ ಹಲವಾರು ಪ್ರಕಾರಗಳಲ್ಲಿ ಬೆಳೆದಿದೆ. ಬೆಳೆಯುತ್ತಲೂ ನಡೆದಿದೆ. ಆಧುನಿಕ ಕನ್ನಡದ ಮೊದಲ ತಲೆಮಾರಿ ಲೇಖಕರು ಬಹುಪ್ರಕಾರಗಳಲ್ಲಿ ಸಾಹಿತ್ಯ ರಚಿಸಿ, ಕನ್ನಡ ಸಾಹಿತ್ಯವನ್ನು ಬಲಪಡಿಸಿದ್ದಾರೆ. ಲೇಖಕರು ತಮ್ಮ ಜೀವಾನುಭವವನ್ನು ಚಿಂತನೆಗಳನ್ನು ಅಭಿವ್ಯಕ್ತಿಸುವ ಬಹುಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದ್ದರೂ, ಸಾಮಾನ್ಯವಾಗಿ ಅವರ ಒಲವು ಕಾವ್ಯದ ಕಡೆಗೆ ಆಧುನಿಕರಾಗಿದ್ದರೂ, ಪ್ರಾಚೀನ ಅಥವಾ ಸಾಹಿತ್ಯ ಪರಂಪರೆಯ ಹಿನ್ನಲೆಯಲ್ಲಿ ಮಹಾಕಾವ್ಯವನ್ನು ರಚಿಸುವುದು ಅವರ ಗುರಿಯಾಗಿತ್ತು. ಏಕೆಂದರೆ ಕಾವ್ಯಕ್ಕೆ ದೊಡ್ಡ ಪರಂಪರೆಯಿದೆ. ಕಾವ್ಯವು ಜೀವನಾನುಭವಗಳ ಅಭಿವ್ಯಕ್ತಿಗೆ ಸೂಕ್ತವಾದ ಪ್ರಕಾರವೆಂದು ಭಾವಿಸಿದ್ದರು. ಆದ್ದರಿಂದ ಆಧುನಿಕ ಕನ್ನಡ ಮೊದಲ ತಲೆಮಾರಿನ ಲೇಖಕರು ಕಾವ್ಯವನ್ನು ಮುಖ್ಯ ಅಭಿವ್ಯಕ್ತಿ ಪ್ರಕಾರವೆಂದು ಭಾವಿಸಿ ಕಾವ್ಯ ರಚಿಸಿದರು. ಕಾವ್ಯ ಬಿಟ್ಟರೆ ಕಾದಂಬರಿ ಒಂದು ಮಹತ್ವದ ಪ್ರಕಾರವಾಗಿ ಕಾಣುತ್ತದೆ. ದೈತ್ಯ ಲೇಖಕರು ಎಲ್ಲಾ ಪ್ರಕಾರಗಳಲ್ಲಿಯೂ ಬರೆಯುತ್ತಾರೆ. ಬೇಂದ್ರೆ, ಮಾಸ್ತಿ, ಕಾರಂತ, ಡಿ.ವಿ.ಜಿ. ಮುಂತಾದವರು ಇದಕ್ಕೆ ಉದಾಹರಣೆಯನ್ನು ಕೊಡಲಾಗಿದೆ.

ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿಯು ಮೇಜರ್ ಸಾಹಿತ್ಯವಾದರೆ ಸಣ್ಣಕತೆಯು ಮೈನರ್ ಸಾಹಿತ್ಯ ಎಂದು ಕರೆಯುತ್ತಾರೆ. ವಿಸ್ತಾರವಾದ ಬದುಕಿನ ಅನುಭವವುಳ್ಳವರು ಆಳ, ಅಗಲದ ಚಿಂತನೆವುಳ್ಳವರು ತಮ್ಮ ಅನುಭವಗಳನ್ನು ಅಭಿವ್ಯಕ್ತಿಸಲು ಕಥೆ ಪ್ರಕಾರ ಸೂಕ್ತವಲ್ಲವೆಂದು ಭಾಪಿಸುತ್ತಾರೆ. ಈ ಕಾರಣದಿಂದ ನವೋದಯ ಸಾಹಿತ್ಯ ಸಂದರ್ಭದಲ್ಲಿ ಬೇರೆ ಪ್ರಕಾರಗಳು ಬೆಳೆದಂತೆ ಸಣ್ಣ ಕಥಾಸಾಹಿತ್ಯ ಪ್ರಕಾರ ಬೃಹತ್ ಆಗಿ ಬೆಳೆಯಲಿಲ್ಲ. ಹಾಗೆಂದು ಈ ಪ್ರಕಾರವನ್ನು

ನಿರ್ಲಕ್ಷಿಸಿಲ್ಲ. ಕುವೆಂಪು, ಬೇಂದ್ರೆ, ಕಾರಂತ ಮುಂತಾದ ಲೇಖಕರು ಅನೇಕ ಸಣ್ಣಕಥೆ, ಕಾದಂಬರಿಗಳನ್ನು ಬರೆದಿದ್ದಾರೆ. ಮಾಸ್ತಿಯವರು ಮಾತ್ರ ಸಣ್ಣಕಥಾ ಪ್ರಕಾರವನ್ನು ಮೆಚ್ಚಿಕೊಂಡರು. ತಮ್ಮ ಲೋಕಾನುಭವವನ್ನು ಅಭಿವ್ಯಕ್ತಿಸಲು ಸಣ್ಣಕಥೆಯೇ ಸೂಕ್ತವಾದ ಪ್ರಕಾರವೆಂದು ಭಾವಿಸಿದರು. ನೂರು ಕಥೆಗಳನ್ನು ಬರೆದು ಕನ್ನಡದಲ್ಲಿ ಸಣ್ಣಕಥೆಗಳ ಜನಕ ಎಂದು ಕರೆಸಿಕೊಂಡಿದ್ದಾರೆ.

ವಸಾಹತುಶಾಹಿ ಆಡಳಿತ ಆರಂಭವಾದ ಮೇಲೆ ನಾಡು, ನಾಡಿನಲ್ಲಿ ಅನೇಕ ಬದಲಾವಣೆಗಳು ಆರಂಭವಾದವು. ಆಧುನಿಕತೆ ಬೆಳೆಯಲಾರಂಭಿಸಿತು. ಸಮಾಜ ಹೊಸ ಆಲೋಚನೆಗಳಿಗೆ ಒಳಗಾಯಿತು. ಅನೇಕ ಕ್ಷೇತ್ರಗಳಲ್ಲಿ ಹೊಸ ಬೆಳವಣಿಗೆಯು ವಿಸ್ತರಿಸಿತು. ಇದರಿಂದ ಸಂಪ್ರದಾಯ, ಸಮಾಜ, ಸಮುದಾಯಗಳು ಆಧುನಿಕತೆಗೆ ಎದುರಾದವು. ಅನೇಕ ಸಂಘರ್ಷಗಳುಂಟಾದವು. ಅದರ ಪರಿಣಾಮಗಳನ್ನು ಮಾಸ್ತಿ ಆದಿಯಾಗಿ ಆ ಕಾಲದ ಲೇಖಕರು ತಮ್ಮ ಕಥೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಸಮಾಜದಲ್ಲಾಗುವ ಬದಲಾವಣೆಗಳನ್ನು ಬಿಕ್ಕಟ್ಟು ಸಂಘರ್ಷಗಳೊಂದಿಗೆ ಚಿತ್ರಿಸಿದ್ದಾರೆ.

ಎರಡನೇ ತಲೆಮಾರಿನ ಲೇಖಕರು ಅಭಿವೃದ್ಧಿಯಾಗುತ್ತಿರುವ ಸಮಾಜದಲ್ಲಿ ವ್ಯಕ್ತಿ ಮತ್ತು ಸಮಾಜದ ಸಂಬಂಧವನ್ನು ಕುರಿತು ಆಲೋಚಿಸಿದರು. ವ್ಯಕ್ತಿ ವಿಶಿಷ್ಟತೆಯನ್ನು ಎತ್ತಿ ಹಿಡಿದರು. ಇವರ ಸಾಹಿತ್ಯವನ್ನು ಕನ್ನಡದಲ್ಲಿ ನವ್ಯ ಸಾಹಿತ್ಯ ಎಂದು ಗುರುತಿಸಲಾಗಿದೆ. ಮುಖ್ಯವಾಗಿ ಯು.ಆರ್.ಅನಂತಮೂರ್ತಿ, ಲಂಕೇಶ, ಚಿತ್ತಾಲ, ಬಿ.ಸಿ. ರಾಮಚಂದ್ರಶರ್ಮ, ದೇಸಾಯಿ ಮುಂತಾದ ಕಥಾ ಲೇಖಕರು ನಗರ ಕೇಂದ್ರಿತ ಆಧುನಿಕ ಪ್ರಜ್ಞೆಯ ವ್ಯಕ್ತಿಯನ್ನು ಅವನ ಉಸಿರುಗಟ್ಟುವ ಅನುಭವಗಳನ್ನು ಕಥೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಮುಂದುವರೆದಂತೆ ಕನ್ನಡದಲ್ಲಿ ಬಂಡಾಯದಲಿತ ಸಾಹಿತ್ಯ ಚಳುವಳಿ ಕಾಣಿಸಿಕೊಂಡಿತು. ಬಡವರು, ಅಲಕ್ಷಿತರು ಸಮಾಜದ ಅಂಚಿನಲ್ಲಿರುವವರು ಮುಂತಾದವರು ಅಕ್ಷರ ಕಲಿತು ಮೊದಲ ಬಾರಿಗೆ ತಮ್ಮ ವಿಶಿಷ್ಟ ಅನುಭವಗಳನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದರು. ಈ ಸಾಹಿತ್ಯ ಚಳುವಳಿಯಲ್ಲಿ ದೇವನೂರು ಮಹಾದೇವ, ಕುಂ.ವೀರಭದ್ರಪ್ಪ, ಬೋಳುವಾರು, ಬಾನುಮುಷ್ತಾಕ, ಬಿ.ಟಿ. ಲಲಿತನಾಯಕ್, ರಾಮಣ್ಣ ಮುಂತಾದವರು ಕಷ್ಟ ಬದುಕನ್ನು ತಮ್ಮ ಕಥಾ ಲೋಕದ ಮೂಲಕ ಅಭಿವ್ಯಕ್ತಿಸಿ ಹೊಸ ಸಂವೇದನೆಯನ್ನು ತಂದರು. ಕಥಾ ಸಾಹಿತ್ಯ ಇವರಿಂದ ಹೊಸ ಆಯಾಮಾ ಪಡೆಯಿತು.

ಎಂಭತ್ತು ಮತ್ತು ತೊಂಭತ್ತರ ದಶಕದವರೆಗೆ ದಲಿತ ಬಂಡಾಯ ಸಾಹಿತ್ಯ ಚಳುವಳಿಯ ಪ್ರಭಾವ ಕಾಣುತ್ತದೆ. ತೊಂಭತ್ತರಿಂದ ಈಚೆಗೆ ಪ್ರಭಾವ ಕಡಿಮೆಯಾಗಿ ಚಳುವಳಿಗಳೇ ಇಲ್ಲದಂತಾದವು. ಚಳುವಳಿಗಳು ಇದ್ದರೆ ಸಾಹಿತ್ಯಕ್ಕೆ ಒಂದು ರೂಪ ಬರುವುದನ್ನು ಕಂಡಿದ್ದೇವೆ. ಆದರೆ ಚಳುವಳಿಗಳು ಇಲ್ಲದ ಕಾಲದಲ್ಲಿಯೂ ಸಾಹಿತ್ಯ ರಚನೆ ನಿಂತಿಲ್ಲ. ಈ ದಶಕಗಳಲ್ಲಿ ಹೊಸ ತಲೆಮಾರಿನವರು

ತಮ್ಮದೇ ಆದ ನೆಲೆಯಲ್ಲಿ ಸಾಹಿತ್ಯ ರಚಿಸುತ್ತಿದ್ದಾರೆ. ಅದರಲ್ಲೂ ಕಥಾ ಸಾಹಿತ್ಯ ಪ್ರಕಾರ ಹೆಚ್ಚು ವಿಶಿಷ್ಟವಾಗಿ ಬೆಳೆಯುತ್ತಾ ಬರುತ್ತಿದೆ. ಈ ದಶಕಗಳಲ್ಲಿ ಕಥೆಗಾರ್ತಿಯವರು ಮುಂಚೂಣಿಯಲ್ಲಿದ್ದಾರೆ. ಪ್ರಮುಖವಾಗಿ ರೇಖಾರಾಣಿ, ಬಿ.ಟಿ.ಜಾಹ್ನವಿ, ಸುನಂದಾ ಪ್ರಕಾಶ ಕಡಿಮೆ, ಸುಮಂಗಲ, ಸಂಧ್ಯಾ ಹೊನಗುಂಟಕರ್, ಶಾಂತಕುಮಾರಿ, ಕೆ.ರಾಜಲಕ್ಷ್ಮಿ, ಹೆಚ್. ನಾಗವೇಣಿ ಮುಂತಾದ ಮಹಿಳೆಯರು ಕಥಾ ಸಾಹಿತ್ಯದಲ್ಲಿ ಉತ್ತಮ ಸಾಧನೆ ಮಾಡುತ್ತಿದ್ದಾರೆ.

ಸಾಮಾನ್ಯವಾಗಿ ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಮತ್ತು ಸಾಹಿತ್ಯ ಚಳುವಳಿಗಳ ಸಂದರ್ಭದಲ್ಲಿ ಮಹಿಳೆ ಇವುಗಳಲ್ಲಿ ಭಾಗಿಯಾಗಿ ಬರೆದದ್ದು ಕಡಿಮೆ. ನವೋದಯ, ನವ್ಯ, ಪ್ರಗತಿಶೀಲ ಮುಂತಾದ ಸಾಹಿತ್ಯಿಕ ಚಳುವಳಿಗಳ ಕಾಲದಲ್ಲಿ ಮಹಿಳೆಯರು ಬರೆಯುತ್ತಿದ್ದರು. ಈ ಚಳುವಳಿಗಳ ನೆಲೆಯಿಂದ ಅವರ ಸಾಹಿತ್ಯ ರಚನೆಯಾಗಿಲ್ಲವೆಂದು ಹೇಳಬಹುದು. ಆದರೆ ಶತಮಾನದ ಉದ್ದಕ್ಕೂ ಮಹಿಳೆಯರು ತಮ್ಮದೇ ಆದ ಅನುಭವಗಳ ಚಿಂತನೆಗಳ ಹಿನ್ನೆಲೆಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಕುರಿತು ಸಾಹಿತ್ಯ ರಚಿಸಿದ್ದಾರೆ. ದಲಿತ ಬಂಡಾಯ ಸಂದರ್ಭದಲ್ಲಿ ಕಾಣಿಸಿಕೊಂಡ ಸ್ತ್ರೀ ಬರಹಗಾರರು ಈ ಚಳುವಳಿಯ ಹಿನ್ನೆಲೆಯಲ್ಲಿ ಬರೆದಿರುವುದನ್ನು ಕಾಣಬಹುದು.

೧೯೨೦ರ ನಂತರ ಕಥಾಸಾಹಿತ್ಯಕ್ಕೆ ಮಾಸ್ತಿಯವರಿಂದ ವಿಶೇಷ ಮುನ್ನಣೆ ದೊರೆತು ಬೆಳವಣಿಗೆ ಹೊಂದಿತು. ಈ ಸಂದರ್ಭದಲ್ಲಿ ಇಂತಹ ಚಳುವಳಿಯ ಪ್ರಭಾವ ಲೇಖಕರಿಗೆ ಹೊರತಾಗಿಲ್ಲದಿಲ್ಲ. ಪರಂಪರಾಗತವಾಗಿ ಮಹಿಳೆಯರು ಕಥೆಗಾರ್ತಿಯರಾಗಿದ್ದರು. ಆದರೆ ಅವರ ಕಥೆಗಳು ಪುರಾಣ ಕಥೆಗಳಿಗಿಂತ ಭಿನ್ನವಾಗಿವೆ. ಆದ್ದರಿಂದ ಇದನ್ನು ಕಥಾಸಾಹಿತ್ಯ ಎಂದು ಕರೆಯಲಾಗುವುದಿಲ್ಲ. ಮಹಿಳಾ ಕಥಾಸಾಹಿತ್ಯ ಪರಂಪರೆ ಒಂದು ಗಂಭೀರ ಸಾಹಿತ್ಯವಾಗಿ ಸ್ಪಷ್ಟರೂಪತಾಳಿದ್ದು ಇಪ್ಪತ್ತನೆಯ ಶತಮಾನದಲ್ಲಿ ಈ ಸಂದರ್ಭದಲ್ಲಿ ಈ ಪರಂಪರೆಯಲ್ಲಿ ಕಥೆಗಳು ಈ ಪ್ರಕಾರಕ್ಕಿಂತ ಭಿನ್ನವಾಗಿದ್ದವು. ಆದ್ದರಿಂದ ಮೊದಲನೆಯ ಪೀಳಿಗೆಯ ಲೇಖಕಿಯರೆಂದರೆ ಶ್ಯಾಮಲಾ ಬೆಳಗಾಂವಕರ್, ಕೊಡಗಿನ ಗೌರಮ್ಮ ಹಾಗೂ ಸರಸ್ವತಿ ರಾಜವಾಡೆಯವರು ಮುಖ್ಯವಾಗಿದ್ದು ಅವರನ್ನು ಈ ಪ್ರಕಾರದ ಆದ್ಯರೆಂದು ಗುರುತಿಸಲಾಗಿದೆ. ಈ ಕಾಲಾವಧಿಯಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯನ್ನು ಒಬ್ಬ ವ್ಯಕ್ತಿಯಾಗಿ ಗುರುತಿಸಲ್ಪಟ್ಟಿದೆ. ಪತ್ನಿ, ವಿಧವೆ, ವೇಶ್ಯೆ ಹೀಗೆ ಪುರುಷನ ಸಂಬಂಧದಲ್ಲಿಯೇ ಗುರುತಿಸಲ್ಪಟ್ಟಿದರಿಂದ ಅವಳಿಗೆ ಸ್ವತಂತ್ರ್ಯವಾದ ಅಸ್ಥಿತ್ವದಿಂದ ಸಾಂಪ್ರದಾಯಿಕ ದೃಷ್ಟಿಕೋನದಲ್ಲಿ ಪುರುಷ ಹಿತಾಸಕ್ತಿಗಳ ಮಾದರಿಯಲ್ಲಿ ಸ್ತ್ರೀಯ ಸಮಸ್ಯೆಗಳನ್ನು ಚರ್ಚಿಸುತ್ತಾ ಅದರ ಮೂಲ ಕಾರಣಗಳನ್ನು ಶೋಧಿಸುವ ಪ್ರಯತ್ನ ಮಾಡದೆ, ವಾಸ್ತವತೆಯನ್ನು ಒಪ್ಪಿಕೊಳ್ಳುವ ಸಾಂಪ್ರದಾಯಕ ದೃಷ್ಟಿಕೋನ ಲೇಖಕಿಯರಲ್ಲಿ ಕಾಣಬಹುದಾಗಿದೆ.

ಇವರು ನಂತರ ಎರಡನೆಯ ಪೀಳಿಗೆಯ ಲೇಖಕಿಯರಲ್ಲಿ ಕ್ರಾಂತಿಕಾರಕ ಬದಲಾವಣೆ ಕಾಣದೇ ಹೋದರು, ವಾಸ್ತವತೆಯ ಅರಿವು ಜಾಗೃತವಾಗಿ ವ್ಯವಸ್ಥೆಯ ವಿರುದ್ಧ ಧನಿ, ಪ್ರತಿಭಟನೆಯನ್ನು ಕೃತಿಯ ಮೂಲಕ ವಿವರಿಸಿದರು. ಈ ಪೀಳಿಗೆಯ ಲೇಖಕಿಯರಲ್ಲಿ ಅನುಪಮ ನಿರಂಜನ ಹಾಗೂ ತ್ರಿವೇಣಿಯವರು ಪ್ರಧಾನವಾಗಿ ಕಂಡುಬರುತ್ತಾರೆ. ವೈಜ್ಞಾನಿಕ ಹಾಗೂ ಮನೋವೈಜ್ಞಾನಿಕ ಒಳನೋಟಗಳನ್ನು ಹೊಂದಿದ ಈ ಲೇಖಕಿಯರು ಸಣ್ಣಕತೆ, ಕಾದಂಬರಿಯ ಮಾಧ್ಯಮಕ್ಕೆ ಹೊಸ ಆಳ ವಿಸ್ತಾರಗಳನ್ನು ಒದಗಿಸಿದರು. ಸ್ತ್ರೀಯನ್ನು ಕೇವಲ ಬಲಿಪಶುವಾಗಿ ಕಾಣದೆ ಅವಳಲ್ಲಿ ಸ್ವತಂತ್ರ್ಯ, ಸ್ವಯಂ ಶಕ್ತಿಯನ್ನು ಗುರುತಿಸುವುದರ ಮೂಲಕ ಹೊಸ ಪ್ರತಿಮೆಗಳನ್ನು ನೀಡಿದರು.

ಸ್ವಾತಂತ್ರ್ಯೋತ್ತರದ ಕಾಲದಲ್ಲಿ ಬರೆಯ ತೊಡಗಿದ ಲೇಖಕಿಯರಲ್ಲಿ ವೀಣಾ ಶಾಂತೇಶ್ವರಿ ಹಾಗೂ ರಾಜಲಕ್ಷ್ಮಿಯವರು ಎನ್.ರಾವ್ ಪ್ರಮುಖರಾಗಿದ್ದಾರೆ. ಇವರು ತಮ್ಮ ಕಥೆಗಳಲ್ಲಿ ಬದುಕಿನ ಸಂಕೀರ್ಣತೆಯನ್ನು ಮೂಡಿಸಿದ್ದರು. ಸೂಕ್ಷ್ಮ ಮನಸ್ಸಿನ ಹೆಣ್ಣೊಬ್ಬಳು ತನ್ನೊಳಗಿನ ಭಾವನೆಗಳಿಗೆ ಮುಖಾಮುಖಿಯಾಗುವ ತಾನು ಬಯಸಿದ ಆದರ್ಶಗಳನ್ನು ವಾಸ್ತವತೆಗೆ ತರುವ ಆಧುನಿಕ ಹೆಣ್ಣೊಬ್ಬಳ ಚಿತ್ರಣ ವೀಣಾ ಅವರ ಕಥೆಗಳಲ್ಲಿ ವ್ಯಕ್ತವಾಗಿವೆ. ಇವರ ಕಥೆಗಳಲ್ಲಿ ಬಹುಪಾಲು ನಾಯಕಿಯರು ಆತ್ಮವಿಶ್ವಾಸ ಪ್ರತಿಭಟನೆ ಧನಿಯಿರುವವರಾಗಿದ್ದಾರೆ. ಎಪ್ಪತ್ತರ ದಶಕದ ಕೊನೆಯಲ್ಲಿ ಕಾಣಿಸಿಕೊಂಡ ವೈದೇಹಿ ಕಥೆಗಳಲ್ಲಿ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ಹಿಂಸೆ, ಕ್ರೌರ್ಯ ಮುಖ್ಯವಾಗಿವೆ. ಸ್ವಾಭಿಮಾನಿ ಸ್ತ್ರೀ ಪಾತ್ರಗಳಿರುವಂತೆ, ಗಟ್ಟಿಯಾದ ಪುರುಷ ಚಿತ್ರಗಳ ಕೊರತೆಯಿದೆ. ಅಸ್ಮಿತತೆಯ ಹುಡುಕಾಟದಲ್ಲಿ ಎರಡನೇ ಹಂತದಲ್ಲಿ ಕಾಣಿಸಿಕೊಂಡ ಹೊಸ ತಲೆಮಾರಿನ ಕತೆಗಾರ್ತಿಯಾದ ನೇಮಿಚಂದ್ರ ಕಥೆಗಳಲ್ಲಿ ಸ್ವಾವಲಂಭಿ, ಸ್ವಂತಿಕೆಯುಳ್ಳ ಆತ್ಮವಿಶ್ವಾಸದ ಕಥಾನಾಯಕಿಯರಿದ್ದಾರೆ. ಎಂಬತ್ತರ ದಶಕದ ನಂತರ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಹಾಗೂ ದಲಿತ ಹಿನ್ನೆಲೆಯ ಲೇಖಕಿಯರು ಕಂಡುಬಂದು ಮುಸ್ಲಿಂ ಸಂಪ್ರದಾಯ ಪದ್ಧತಿ, ಮುಸ್ಲಿಂ ಸ್ತ್ರೀಯರ ಅಭದ್ರ ವೈವಾಹಿಕ ಜೀವನ, ವಿಚ್ಛೇದನ ಸಮಸ್ಯೆ, ಅನಕ್ಷರತೆ ಇತ್ಯಾದಿ ಸ್ತ್ರೀಯರ ಸಮಸ್ಯೆಗಳನ್ನು ಕಥೆಯಲ್ಲಿ ಕಾಣಿಸಿದ್ದಾರೆ. ಲಂಬಾಣಿ ಸಂಸ್ಕೃತಿಯ ಹಿನ್ನೆಲೆಯಿಂದ ಬಂದ ಬ.ಟಿ.ಲಲಿತಾನಾಯಕರು ತಮ್ಮ ಕಥೆಗಳಲ್ಲಿ ಲಂಬಾಣಿ ಜನಾಂಗದ ಸಾಂಸ್ಕೃತಿಕ ವಿವರಗಳಿಗಿಂತ ಈ ಸಮುದಾಯದಲ್ಲಿ ಕಂಡು ಬರುವ ಸ್ತ್ರೀಯರ ಶೋಷಣೆ, ಹಸಿವು, ಅನಕ್ಷರತೆ ಮುಂತಾದ ಸಾಮಾಜಿಕ ಸಮಸ್ಯೆಗಳು ಪ್ರಧಾನವಾಗಿವೆ. ಇವರ ನಂತರ ಇಪ್ಪತ್ತೊಂದನೆಯ ದಶಕದಲ್ಲಿ ಕಾಣಿಸಿಕೊಂಡ ಹೊಸ ತಲೆಮಾರಿನ ಕಥೆಗಾರ್ತಿಯರಾದ ಸುನಂದಾ, ಎಂ.ಎಸ್. ವೇದಾ, ನಾಗವೇಣಿ, ಬಿ.ಟ. ಜಿಹ್ನಾವಿ ಇತ್ಯಾದಿ ಲೇಖಕಿಯರು ಸ್ತ್ರೀವಾದದಿಂದ ಹೊರತಾಗಿ ತಮ್ಮದೇ ಆದ ಹೊಸ ಅಭಿವ್ಯಕ್ತಿಯ ನೆಲೆಯಲ್ಲಿ ಸಮಕಾಲೀನ ಸಮಾಜದ ಸ್ತ್ರೀಯರ ಸಮಸ್ಯೆಗಳು ಕುರಿತು ಕಥೆಯಲ್ಲಿ ಅಭಿವ್ಯಕ್ತಿಸಿದ್ದಾರೆ.

೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಒಂದಿಲ್ಲೊಂದು ರೀತಿಯಿಂದ ಜಾಗತಿಕ ಸ್ವರೂಪ ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾದರು. ಇವರು ಬರೆಯುತ್ತಿರುವ ವೇಳೆಗೆ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಮಹಿಳೆಗೆ ಇಂದು ಎಲ್ಲಾ ಕಾರ್ಯಕ್ಷೇತ್ರಗಳೂ ಮುಕ್ತವಾಗಿವೆಯಲ್ಲದೆ. ಶಿಕ್ಷಣದ ಎಲ್ಲ ಪ್ರಕಾರಗಳೂ ಲಭ್ಯವಿದೆ. ಹೀಗಾಗಿ ಅವಳ ಅನುಭವ ಹಿಂದೆ ಎಂದೂ ಇಲ್ಲದ ವ್ಯಾಪ್ತಿ, ವೈವಿಧ್ಯಗಳನ್ನು ಹೊಂದಿದೆ. ಅದರ ಜೊತೆಗೆಯೆ ಸಮಾನತೆ, ಸ್ವಾತಂತ್ರ್ಯಗಳು ಹೊಸ ಸಮಸ್ಯೆಗಳು ಹುಟ್ಟುಹಾಕಿವೆ. ಗಂಡು-ಹೆಣ್ಣಿನ ಸಂಬಂಧಗಳಲ್ಲಿಯೂ ಬಿಕ್ಕಟ್ಟು ತಲೆದೋರಿವೆ. ಪುರುಷ ಕೇಂದ್ರಿತ ವ್ಯವಸ್ಥೆಯ ಅಂಗಗಳಾದ ಅವಿಭಕ್ತ ಕುಟುಂಬ ಹಾಗೂ ವಿವಾಹಗಳಂಥ ಸಂಸ್ಥೆಗಳ ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ ಆದರೆ, ಸಾಮಾಜಿಕ ಧೋರಣೆಗಳಲ್ಲಿ ಬದಲಾವಣೆಯಾಗಿದ್ದರೂ ಮನೋಧರ್ಮಗಳಲ್ಲಿ ಸಾಂಪ್ರದಾಯಕ ಜಾಡ್ಯ ಇನ್ನೂ ಉಳಿದುಕೊಂಡಿರುವುದರಿಂದ ಘರ್ಷಣೆಗಳು ನಡೆಯುತ್ತಲೇ ಇವೆ. ವೈದೇಹಿ, ಸಾರಾ ಅಬೂಬಕ್ಕರ್, ನೇಮಿಚಂದ್ರರಂಥ ಹೊಸ ತಲೆಮಾರಿನ ಲೇಖಕಿಯರಿಗೆ ತಮ್ಮ ಪರಿಸರದ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಸ್ವರೂಪದ ಅರಿವಿರುವುದರಿಂದ ಅವರು ಬರೆಯುತ್ತಿರುವ ಕತೆಗಳು ಮೊದಲಿನವರ ಕತೆಗಳಿಗಿಂತ ಭಿನ್ನವಾಗಿವೆ. ಪುರುಷರಂತೆ ಮಹಿಳೆಯರೂ ಸಾಹಿತ್ಯ ಕ್ಷೇತ್ರದಲ್ಲಿ ಪ್ರಯೋಗಶೀಲರಾಗಿದ್ದಾರೆ. ಈ ಅಂಶವನ್ನು ಬೆಟಗೇರಿ ಕೃಷ್ಣಶರ್ಮರು ಬಹಳ ಹಿಂದೆಯೇ ಗುರುತಿಸಿದರು. ಸಣ್ಣ ಕಥೆಯ ಪ್ರಭಾವ ಅದರ ಸ್ವರೂಪವೂ ದಿನದಿನಕ್ಕೆ ಬದಲಾಗುತ್ತ ವೈವಿಧ್ಯವನ್ನು ಪಡೆಯುತ್ತ ಬಂದಿದೆ. ಸ್ವಭಾವ ಚಿತ್ರಣ, ಮನೋವಿಶ್ಲೇಷಣ ಇವುಗಳ ಪ್ರಸ್ಥ ಬೆಳೆಯುತ್ತ ಸಣ್ಣಕಥೆಯ ಬಗೆಗಿರುವ ಪರಂಪರೆಯ ವ್ಯಾಖ್ಯೆ ಹೊಸ ಲೇಖಕರ ಕಣ್ಣಿಂದ ಮರೆಯಾಗುತ್ತಲೇ ನಡೆದಿದೆ. ಜೀವನದ ಯಾವುದೊಂದು ಭಾಗವನ್ನು ಕುರಿತು ಕಥನವೂ ಇಂದು 'ಸಣ್ಣಕಥೆ' ಎನಿಸಿಕೊಳ್ಳತೊಡಗಿದೆ. ಹಿಂದಿನವರ ಕಲ್ಪನೆಯಂತೆ ವಸ್ತು, ಪಾತ್ರ, ಬೆಳವಣಿಗೆ ಕೇಂದ್ರ ಪರಿವರ್ತನೆ, ಪರಿಸಮಾಪ್ತ ಮೊದಲಾದ ಕಥಾ ಭಾಗಗಳು ಇರುತ್ತಿದ್ದವು. ಇಂದಿನವರೆಗೆ ಈ ಅಂಗಗಳು ಇರಲೇಬೇಕೆಂಬ ಅಂಶವಿಲ್ಲ. ತಮ್ಮ ಸಾಹಿತ್ಯ ವೈಶಿಷ್ಟದಲ್ಲಿ ಅವು ತಾವಾಗಿ ಬಂದರೆ ಬರಬಹುದು. ಅವುಗಳ ಬಂಧನದಲ್ಲಿ ತಾವು ಸಿಲುಕುವುದು ಬೇಡ ಎಂದು ಅವರ ಅಭಿಪ್ರಾಯವಾಗಿದೆ.

ನವೋದಯ ಸಂದರ್ಭದಲ್ಲಿ ಮಹಿಳೆಯರು ನಾಲ್ಕು ಗೋಡೆಗಳ ಮಧ್ಯೆ ಮಾತ್ರ ಸೀಮಿತವಾಗದೆ ಹೊಸ ಪ್ರಪಂಚವನ್ನು ಕಣ್ತೆರೆದು ನೋಡುವ, ತಮ್ಮ ಬಂಧನಗಳಿಂದ ಬಿಡುಗಡೆ ಪಡೆಯಲು ಯತ್ನಿಸಿದರು. ಈ ನವೋದಯ ಸಂದರ್ಭದಲ್ಲಿ ಸ್ತ್ರೀ ಶಿಕ್ಷಿತಳಾಗಬೇಕೆಂಬ ಆಶಯ ಪ್ರಮುಖವಾಗಿದ್ದು, ಈ ಕಾಲಾವಧಿಯಲ್ಲಿ ಪ್ರಮುಖ ಸಮಸ್ಯೆಗಳಾದ ವಿಧವಾವಿವಾಹ, ಪ್ರೇಮವಿವಾಹ, ಶಿಕ್ಷಣದ ಅವಶ್ಯಕತೆ, ಮೌಢ್ಯ ಸಂಪ್ರದಾಯಗಳನ್ನು ಪ್ರಶ್ನಿಸುವ ಸಾತ್ವಿಕತೆಯನ್ನು ತಮ್ಮ ಬರವಣಿಗೆಯ ಮೂಲಕ ಬಿಡುಗಡೆ ಪಡೆಯುವ ದಾರಿಗಳನ್ನು, ಸಮಾಜದ ನೈಜ ಪರಿಸ್ಥಿತಿಯನ್ನು ಸಾಹಿತ್ಯದ ಮೂಲಕ

ತಿಳಿಸಿದರು. ಈ ಲೇಖಕಿಯರ ಬರವಣಿಗೆಗಳು ಎಲ್ಲಾ ಜನರಲ್ಲೂ ಜಾಗೃತ ಮೂಡಿಸುವಲ್ಲಿ ಯಶಸ್ವಿಯಾಗಿ ಸಮಾಜದ ಬೇಳವಣಿಗೆಯ ದಾರಿಗೆ ನೆರವಾಗಿದೆ. ಪುರುಷರಿಗೆ ಮಹಿಳಾ ಸಮಸ್ಯೆಗಳನ್ನು ಸಾಹಿತ್ಯ ಮೂಲಕ ತಿಳಿಸುತ್ತಾ ಅವರ ಮನಸ್ಸಿನ ಪರಿಚಯವನ್ನು ಮಾಡಿಸುತ್ತಾರೆ. ಸಮಾಜದಲ್ಲಿ ಮಹಿಳೆಗೂ ಒಂದು ಸ್ಥಾನವಿದೆ. ಅವಳ ಆಸೆ–ಆಕಾಂಕ್ಷೆಗಳ ಬಗ್ಗೆ ಹೇಳುತ್ತಾ ಅವರಲ್ಲಿ ಮಹಿಳಾ ಸಂವೇದನೆಯನ್ನು ಮೂಡಿಸಲು ಪ್ರಯತ್ನಿಸುತ್ತಾರೆ. ಕಿರಿಯದರಲ್ಲಿ ಹಿರಿದಾದ ಅರ್ಥವನ್ನು ಕಥೆಗಳ ಮೂಲಕ ಮೂಡಿಸುವಲ್ಲಿ ಪ್ರಯತ್ನಿಸಲಾಗಿದೆ. ಅಂತಹ ಕಥೆಗಾರ್ತಿಯರಲ್ಲಿ ತಿರುಮಲಾಂಬ, ಶ್ಯಾಮಲಾದೇವಿ ಬೇಳಗಾಂವಕರ್, ಸರಸ್ವತಿ ಬಾಯಿ ರಾಜವಾಡೆ, ಶಾಂತದೇವಿ ಮಾಳವಾಡ, ಕೊಡಗಿನ ಗೌರಮ್ಮ, ವಾಣಿ ಮುಂತಾದವರು ಪ್ರಮುಖರಾಗಿದ್ದಾರೆ.

ಇಪ್ಪತ್ತನೆಯ ಶತಮಾನದಲ್ಲಿ ತಿರುಮಲಾಂಬರವರು ಮೊದಲ ಲೇಖಕಿಯರಾಗಿದ್ದಾರೆ. ಅವರು ಬಾಲ್ಯದಲ್ಲಿಯೇ ವೈಧವ್ಯರಾಗಿರುತ್ತಾರೆ. ಈ ವೈಧವ್ಯದ ಕಟ್ಟುಪಾಡುಗಳು, ಸಮಸ್ಯೆಗಳನ್ನು ತಮ್ಮ ಕಥಾ ಬರವಣಿಗೆಯಲ್ಲಿ ಮೂಲ ಪ್ರೇರಣೆಯಾಗಿ ಚಿತ್ರಿಸಿದ್ದಾರೆ. ಅವರು, 'ಸಚ್ಚರಿತ ಸುಧಾರ್ಣವ' ಎಂಬ ಕಥಾ ಸಂಕಲನವನ್ನು ರಚಿಸಿದ್ದಾರೆ. ಇಲ್ಲಿ ಪೌರಾಣಿಕ ವಸ್ತುವಿದ್ದು, ಪುರಾಣದ ಘಟನೆ ಸನ್ನಿವೇಶಗಳನ್ನು ತಮ್ಮ ಶೈಲಿಯಲ್ಲಿ ಸಣ್ಣಕಥೆಗಳಂತೆ ಚಿತ್ರಿಸಿದ್ದಾರೆ. ಈ ಕಥೆಯಲ್ಲಿ, ರಾಮ, ಪರಶುರಾಮ, ಭೀಷ್ಮ, ಪುರು, ಸುಕನ್ಯ, ಶರ್ಮಿಷ್ಠೆ ಹಾಗೂ ಲೋಪ ಮುದ್ರೆಯರನ್ನು ಕುರಿತು ಏಳು ಕಥೆಗಳಿವೆ. ಇಲ್ಲಿ ಪೌರಾಣಿಕ ವ್ಯಕ್ತಿಗಳ ಆದರ್ಶವನ್ನು ಎತ್ತಿ ಹಿಡಿಯಲಾಗಿದೆ. ಒಟ್ಟಾರೆ ತಿರುಮಲಾಂಬರವರು ವಿಧವೆಯರ ಸ್ಥಿತಿಸಮಸ್ಯೆಗಳು, ಪರಿಹಾರಗಳು ಸ್ತ್ರೀ ಶಿಕ್ಷಣ ಇತ್ಯಾದಿಗಳನ್ನು ಕುರಿತು ತಮ್ಮ ಕಥಾಸಾಹಿತ್ಯದಲ್ಲಿ ತಿಳಿಸಿದ್ದಾರೆ.

ತಿರುಮಲಾಂಬರ ನಂತರ ಕಾದಂಬರಿಕಾರ್ತಿಯಾಗಿ ಬಂದವರು ಆರ್.ಕಲ್ಯಾಣಮ್ಮ ಇವರ 'ನಿರ್ಮಿತಿ'ಯಂತಹ ಕಾದಂಬರಿಗಳೂ ಮಹಿಳೆಯರಿಗೆ ಸಾಮಾಜಿಕ ಎಚ್ಚರವನ್ನು ತುಂಬಿವೆ. ಹೆಣ್ಣಿನಲ್ಲಿ ನಿರ್ಭಯ ಮತ್ತು ಆತ್ಮವಿಶ್ವಾಸ ತುಂಬುವಂತಹ ವಿಚಾರಗಳನ್ನು ಸ್ತ್ರೀ ಪಾತ್ರಗಳ ಮೂಲಕ ಚಿತ್ರಿಸಿದ್ದಾರೆ.

ಸರಸ್ವತಿ ರಾಜವಾಡೆಯವರ ಕತೆ 'ಅವಳ ಉದ್ಧಾರ' ಈ ಕಥೆಯಲ್ಲಿ ನಾಯಕಿ ವಿಧವೆಯಾಗಿರುತ್ತಾಳೆ. ನಾಯಕಿ ತನ್ನ ಬಾವನಿಂದಲೇ ಅತ್ಯಾಚಾರಕ್ಕೊಳಗಾಗಿ ಬಸಿರಾದ ಇವಳು ತನ್ನ ಆಶ್ರಯಕ್ಕಾಗಿ ವಿಧವಾಶ್ರಮದಂತೆ ಇರುವ ಒಂದು ವ್ಯಾಪಾರ ಕೇಂದ್ರವನ್ನು ಸೇರುತ್ತಾಳೆ. ಆಶ್ರಮದ ವ್ಯವಸ್ಥಾಪಕ ಅವಳನ್ನು ವಿಧುರನೊಬ್ಬನಿಗೆ ಮಾರಿಕೊಳ್ಳುತ್ತಾನೆ. ವಿಧುರ ಕುಡಕ ಹಾಗೂ ಸ್ವೇಚ್ಛಾಚಾರಿ. ಅವಳು ಅವನ ನಡತೆಯನ್ನು ಪ್ರತಿಭಟಿಸಿದಾಗ ಮನೆಬಿಟ್ಟು ಹೊರಬೀಳಬೇಕಾಗುತ್ತದೆ. ಅಸಹಾಯಳಾದ ಅವಳು ದಲ್ಲಾಳಿಯೊಬ್ಬನ ಕೈಗೆ ಸಿಕ್ಕು ವೇಶ್ಯಾವೃತ್ತಿಯಲ್ಲಿ ಮೊರೆ ಹೋಗುತ್ತಾಳೆ. ಈ ಕಥೆಯಲ್ಲಿ

ಹೆಣ್ಣಿನ ಶೋಷಣೆಯನ್ನು ನೋಡಬಹುದು. ಈ ಕತೆಯ ಕಥನ ವಸ್ತು ಪರಿಚಯವಾದರೂ ರಾಜವಾಡೆಯವರು ಅದನ್ನು ನಿರ್ವಹಿಸಿರುವ ರೀತಿಯಲ್ಲಿ ಹೊಸದನ್ನು ಕಾಣಬಹುದು.

ಕೊಡಗಿನ ಗೌರಮ್ಮನವರ 'ವಾಣಿಯ ಸಮಸ್ಯೆ' ಇವರು ತಮ್ಮ ಕಥೆಗಾಗಿ ಬಳಸಿದ ತಂತ್ರವು ಹೊಸ ರೀತಿಯಲ್ಲಿದೆ. ಆಧುನಿಕತೆಯ ಮುಖ್ಯ ಲಕ್ಷಣಗಳಲ್ಲೊಂದಾದ ಅಂತರ್ಮುಖತೆಯು ಈ ಕತೆಯ ಜೀವಾಳವಾಗಿದೆ. ಈ ಕತೆಯ ಕೇಂದ್ರಬಿಂದು ಇಂದು ಅವಳ ಏಕಾಕಿ ತನ, ವಾಣಿಯೊಡನೆ ಅವಳು ಬೆಳೆಸುವ ಸೌಹಾರ್ದದ ಸಂಬಂಧ, ರತ್ನನ ಸಂಪರ್ಕದಲ್ಲಿ ಅವಳಲ್ಲಿ ಹುಟ್ಟಿಕೊಂಡ ಹೊಸ ಬಯಕೆಗಳು, ಈ ಬಯಕೆಗಳಿಂದ ಉಂಟಾಗುವ ನೈತಿಕ ಸಮಸ್ಯೆ, ಈ ಸಮಸ್ಯೆಗಳಿಗೆ ಅವಳು ಕೊನೆಯಲ್ಲಿ ಕಂಡುಕೊಳ್ಳುವ ಪರಿಹಾರ ಇವೆಲ್ಲವೂ ಅತ್ಯಂತ ಸಹಜವಾಗಿ ಕತೆಯಲ್ಲಿ ಮೂಡಿಬರುತ್ತದೆ. ಕತೆಯ ಭಾವನಾ ಪ್ರಪಂಚವು ತೀರ ಸ್ವಾಭಾವಿಕವೆಂದು ನಮ್ಮ ಅನುಭವಕ್ಕೆ ಬರುತ್ತದೆ. ಕತೆಯಲ್ಲಿ ಹೆಣ್ಣಿನ ಬಾಳಿನ ವೈಫಲ್ಯದ ಚಿತ್ರವಿರುವುದನ್ನು ನೋಡಬಹುದು.

ಸ್ವಾತಂತ್ರ್ಯ ನಂತರ ಮಹಿಳೆ ತನ್ನನ್ನು ಸಾಹಿತ್ಯದ ಮೂಲಕ ಅವಲೋಕಿಸಿಕೊಳ್ಳುವ ಕ್ರಮ, ಅದು ನಮ್ಮ ಸಮಾಜ, ಸಂಪ್ರದಾಯದ ವ್ಯವಸ್ಥೆಯಲ್ಲಿ ಕ್ರಾಂತಿಕಾರವಾದದ್ದೇ ಕುಟುಂಬದ ಸೂತ್ರಧಾರಿಯಾಗಿದ್ದರೂ, ಮಧ್ಯಮ ಮತ್ತು ಶ್ರೀಮಂತ ಮಹಿಳೆಗೆ ತನ್ನ ಮನೆಯನ್ನು, ಮಕ್ಕಳನ್ನು ತನಗೆ ಹೇಗೆ ಬೇಕೋ ಹಾಗೆ ರೂಪಿಸಬೇಕೆಂಬುದಕ್ಕೆ ಬಹಳ ಮೆಟ್ಟಿಗೆ ಅವಕಾಶವಿರಲಿಲ್ಲ. ಜೀವನುದುದ್ದಕ್ಕೆ ಒಮ್ಮೆ ತಂದೆ-ಮತ್ತೊಮ್ಮೆ ಗಂಡ, ಕೊನೆಗೆ ಗಂಡ ಮಕ್ಕಳ ಪ್ರೀತಿ, ಕಾಳಜಿಗಳ ನಡುವೆಯೇ ಇರಬೇಕಾದ ಮಹಿಳೆಗೆ ರಕ್ಷಣೆ-ಗೌರವ ಭರವಸೆಗಳಿದ್ದರೂ ಆಕೆ "ಮೌನಗೌರಿ" ಯಾಗಿರಬೇಕೆಂದು ಒತ್ತಾಯಿಸುತ್ತಾ ಆರಾಧಿಸುವ ಸ್ಥಿತಿ ನಮ್ಮದು ಇಂತಹ ಸ್ಥಿತಿಯಲ್ಲಿ, ಓದುಬರಹ ಕಲಿತು, ಕಲಿತದ್ದನ್ನು ನಿತ್ಯದ ವ್ಯವಹಾರಕ್ಕೆ ಬಳಸಿಕೊಳ್ಳುವುದಕ್ಕೆ ಅತಿರಿಕ್ತವಾಗಿ, ಒಬ್ಬ ಮಹಿಳೆ ತನ್ನ ಅನುಭವ ಅನಿಸಿಕೆ ತಳಮಳಗಳನ್ನು ಅವಲೋಕಿಸಿಕೊಳ್ಳಲು ಹೊರಡಬೇಕೆಂದರೆ ಸಾಕಷ್ಟು ಗಟ್ಟಿತನ ಮಹಿಳೆಯರಲ್ಲಿರಬೇಕು. ಕೇವಲ ಪ್ರತಿಭೆ ಅಥವಾ ಕಲಾಭಿವ್ಯಕ್ತಿಯ ವಿಶೇಷ ಶಕ್ತಿಯಿಂದ ಮಾತ್ರ ಮಹಿಳೆಯ ಸಾಹಿತ್ಯ ಹೊರಬರುವುದಿಲ್ಲ. ಮಹಿಳೆಯ ಪ್ರತಿಭೆಗೆ ಸವಾಲಾಗುವಂತಹ ಸಾಮಾಜಿಕ ಸಂಪ್ರದಾಯಿಕ ಒತ್ತಡಗಳನ್ನಾಕೆ ಎದುರಿಸುವ ಶಕ್ತಿಯನ್ನು ರೂಢಿಸಿಕೊಳ್ಳಬೇಕಾಗುತ್ತದೆ.

ನವ್ಯ ಪಂಥದ ಬರಹಗಾರರ ಮೇಲೆ ಪ್ರಾಯ್ಡನ ಲೈಂಗಿಕತೆ, ಮಾರ್ಕ್ಸ್, ಏಂಗಲ್ಸ್ ಆರ್ಥಿಕ ಸಿದ್ಧಾಂತ ನೇರವಾಗಿ ಹಾಗೂ ಪರೋಕ್ಷವಾಗಿ ಪ್ರಭಾವ ಬೀರಿದೆ. ಇಂತಹ ಪ್ರಭಾವಕ್ಕೆ ಲೇಖಕಿಯರು ಹೊರತಾಗಿಲ್ಲದಿಲ್ಲ. ಪುರುಷ ಕೇಂದ್ರಿತ ನೆಲೆಯಿಂದ ಸ್ತ್ರೀಯರನ್ನು ಕಾಣುವ ನವ್ಯದ ಕಥೆ ಕಾದಂಬರಿಗಾರರಿಗೂ, ಸ್ತ್ರೀಯನ್ನು ಸ್ತ್ರೀಕೇಂದ್ರಿತ ನೆಲೆಯಿಂದ ನೋಡುವ ನವ್ಯದ ಕಥೆ. ಕಾದಂಬರಿಗಾರರಿಗೂ, ಕಥೆಗಳು ವಿಶಿಷ್ಟವಾಗಿದ್ದು ಈ ಕಥೆಗಳಲ್ಲಿ ಸ್ತ್ರೀಯ ಗಟ್ಟಿತನವನ್ನು ಮೂಲ

ಹೆಣ್ಣಿನ ಸಮಸ್ಯೆಗಳಿಗೆ ಕಾರಣವನ್ನು ಶೋಧಿಸಿ ಪುರುಷ ಕೇಂದ್ರಿತ ವೈಚಾರಿಕ ಚೌಕಟ್ಟಿನಾಚೆ ಇರುವ ಸ್ವಪ್ರಜ್ಞೆಯ ನೆಲೆಯೊಂದನ್ನು ನವ್ಯದ ಕಥಾಸಾಗರದಲ್ಲಿ ಕಾಣಬಹುದಾಗಿದೆ. ಅವರ ಎಲ್ಲಾ ಕಥೆಗಳಲ್ಲಿ ಸ್ತ್ರೀವಾದಿತವನ್ನು ಗುರುತಿಸಲಾಗಿದೆ. ಇಂತಹ ತಾಂತ್ರಿಕ ಆಲೋಚನೆ ಹೊಂದಿರುವ ಕಥೆಗಾರ್ತಿಯರಲ್ಲಿ ರಾಜಲಕ್ಷ್ಮೀ ಎನ್. ರಾವ್, ವೈದೇಹಿ, ವೀಣಾ ಶಾಂತೇಶ್ವರ ಮುಂತಾದವರು ಪ್ರಮುಖರಾಗಿದ್ದಾರೆ.

ವೈದೇಹಿಯವರ ಬಹುಪಾಲು ಕಥೆಗಳು ಗ್ರಾಮೀಣ ಅವಿಭಕ್ತ ಕುಟುಂಬ ಪರಿಸರ ಹಾಗೂ ಆಧುನಿಕ ಸ್ತ್ರೀ ವ್ಯಕ್ತಿತ್ವದ ಸೂಕ್ಷ್ಮ ಚಿತ್ರಗಳ ಕೇಂದ್ರವಾಗಿವೆ. ಅವರ 'ಅಂತರಂಗದ ಪುಟಗಳು', 'ಮರ–ಗಿಡ ಬಳ್ಳಿ', 'ಗೋಲ', ಇತ್ಯಾದಿ ಕಥಾಸಂಕಲನಗಳನ್ನು ರಚಿಸಿದ್ದಾರೆ. ಮಾನವೀಯ ಸಂಬಂಧ, ಸ್ವಭಾವ, ಸಮಸ್ಯೆಗಳು ವೈದೇಹಿಯವರ ಕಥೆಯ ವಸ್ತುವಾಗಿವೆ. ಉದಾಹರಣೆಗೆ ಅವರ ಪ್ರಮುಖ ಕಥೆಯಾದ 'ಅವಲಂಬಿತರು' ಕಥೆಯು ಒಂದು ಶೋಷಣೆಯ ಕಥೆಯಾಗಿದೆ. ಮಾನವೀಯ ಮೌಲ್ಯಗಳನ್ನು ಕಳೆದುಕೊಂಡ ಮಾಧ್ಯಮ ವರ್ಗದ ಕುಟುಂಬ ಅಮಾಯಕ ಹುಡುಗಿಯನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ವಿಧಾನದ ಅನಾವರಣ ಈ ಕಥೆಯಲ್ಲಿದೆ. ಹೀಗೆ ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ಹಿಂಸೆ, ಕ್ರೌರ್ಯಗಳು ವೈದೇಹಿಯವರ ಕಥೆಗಳಲ್ಲಿ ಕಾಣಬಹುದಾಗಿದೆ. ಗ್ರಾಮೀಣ ಪರಿಸರಕ್ಕೆ, 'ಸಿನಿಮಾ ಟಾಕೀಸ್ ಬಂದಾಗ' ಸ್ತ್ರೀ ಜಗತ್ತಿನಲ್ಲಿ ಆಗುವ ಪರಿವರ್ತನೆಗಳನ್ನು 'ಗುಲಾಬಿ ಟಾಕೀಸ್' ಕಥೆಯಲ್ಲಿ ಕಾಣಲಾಗಿದೆ. ವೈದೇಹಿಯವರ ಕಥೆಗಳಲ್ಲಿ ಸ್ವಾಭಿಮಾನಿ ಸ್ತ್ರೀ ಪಾತ್ರಗಳು ಹೆಚ್ಚಾಗಿ ಕಂಡುಬರುತ್ತದೆ.

ವೀಣಾ ಶಾಂತೇಶ್ವರವರು ನವ್ಯ ಸಾಹಿತ್ಯದಲ್ಲಿ ಪ್ರಮುಖರಾಗಿದ್ದಾರೆ. ನವನಾಗರೀಕತೆಯ ವಾತಾವರಣದಲ್ಲಿ ಸ್ವತಂತ್ರ್ಯವಾಗಿ ಬೆಳೆದ ವೀಣಾ ಅವರು ಮಹಿಳೆಯರ ಸಮಸ್ಯೆಗಳನ್ನೇ ಕಥಾಸಂಕಲನ ಹಾಗೂ ಕಾದಂಬರಿ ಸಾಹಿತ್ಯದಲ್ಲಿ ನೋಡಬಹುದು. ಕಾದಂಬರಿ 'ಗಂಡಸರು', ಕಥಾಸಂಕಲನ 'ಮುಳ್ಳುಗಳು' ಇದರ ಸಾಹಿತ್ಯದ ಮೂಲಕ ಜಗತ್ತನ್ನು ಪ್ರವೇಶಿಸಿದರು. ಅವರು ನವ್ಯ ಚಳುವಳಿಂದ ಪ್ರಭಾವಿತರಾಗಿದ್ದರು. ಅವರ ಮುಳ್ಳುಗಳು ಸಂಕಲನವು ಸ್ತ್ರೀ ಪುರುಷರ ಸಂಬಂಧಗಳನ್ನು ಲೈಂಗಿಕ ಹಿನ್ನಲೆಯಲ್ಲಿ ಚಿತ್ರಿಸಲಾಗಿದೆ. ಪುರುಷ ನಿರ್ಮಿತ ಸಂಸ್ಕೃತಿಗೆ ವಿರೋಧವಾದ ಹೆಣ್ಣನ್ನು ಇಲ್ಲಿ ಚಿತ್ರಿಸಿದ್ದಾರೆ. ಅವರ ಬಹುಪಾಲು ಕಥೆಗಳಲ್ಲಿ ಹೆಣ್ಣು ಸ್ವತಂತ್ರವಾಗಿದ್ದು, ತನ್ನ ಬಾಳ ಸಂಗಾತಿಯನ್ನು, ತಾಯ್ತನವನ್ನು ಆಯ್ಕೆ ಮಾಡಿಕೊಳ್ಳುವ ಧೃಡ ಮನಸ್ಸಿನ ಹೆಣ್ಣಾಗಿ ಚಿತ್ರಿತವಾಗಿದೆ. ಅವರ 'ಬಿಡುಗಡೆ', ಕಥೆಯ ನಾಯಕಿ ಗಂಡನ ಕ್ರೌರ್ಯ ಹಿಂಸೆ ದಬ್ಬಾಳಿಕೆಗಳಿಂದ ನೊಂದು, ಆತನಿಗೆ ಒದಗಿಸಿ ಸಾವಿನಿಂದ ಬಿಡುಗಡೆಯನ್ನು ಹೊಂದುತ್ತಾಳೆ. ಅವರ 'ಕೊನೆಯದಾರಿ' ಕಥೆಯಲ್ಲಿನ ನಾಯಕಿ ಬಯಸುವುದು ತಾಯ್ತನ ಇದಕ್ಕಾಗಿ ಗಂಡನಲ್ಲದೆ ತನ್ನ ಜೀವನದಲ್ಲಿ ಪ್ರವೇಶಿಸಿದ ಅನೇಕ ಪುರುಷರಿಂದ ಆಕೆ ನಿರೀಕ್ಷಿಸುವುದು ಮಗುವನ್ನು ಆದರೆ ಸ್ವಾರ್ಥ ತಡೆಯಿಂದ ಕೂಡಿದ ಪುರುಷರಲ್ಲಿ

ಹೆಣ್ಣು ಕೇವಲ ಬೋಗ ವಸ್ತುವಾಗಿ ಬಳಸಿ ಅವಳ ಆಸೆಯನ್ನು ಈಡೇರಿಸುವಲ್ಲಿ ಸಮಾಜದ ಕಟ್ಟುಪಾಡುಗಳಿಗೆ ಹೆದರಿ ನಿರಾಕರಿಸುತ್ತಾರೆ. ಹೆಣ್ಣಿನ ಲೈಂಗಿಕತೆ ನಿರಾಕರಿಸುವ ಪುರುಷರು, ಹೆಣ್ಣಿನ ಅಗತ್ಯವಾದ ಬಯಕೆಗೆ ಆದರ್ಶಕ್ಕೆ ಅಡ್ಡಗಾಲಾಗುತ್ತದೆ. ಅವರ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಬಹುಪಾಲು ನಾಯಕಿಯರು ಉದ್ಯೋಗಸ್ಥರು, ಮುಂಬಯಿಯ ಜಗತ್ತಿನಲ್ಲಿ ಬದುಕುತ್ತಿರುವ ನಾಗರಿಕರಾಗಿದ್ದು, ಆರ್ಥಿಕ ಸ್ವಾತಂತ್ರ್ಯವಾದ ಆಯ್ಕೆಯನ್ನು, ನಿರ್ಧಾರವನ್ನು ಕಾಣಬಹುದಾಗಿದೆ. ಇದು ಹೆಣ್ಣಿನ ಬಾಳ ಸಂಗಾತಿಯ ಅಥವಾ ತಾಯ್ತನದ ಆಯ್ಕೆಯಾಗಿದೆ. ಇದಕ್ಕೆ 'ಹೀಗೊಂದು ಕಥೆಯ' ಮುಖ್ಯ ನಿರ್ದಶನವಾಗಿದೆ. ಅವರ ಎಲ್ಲಾ ಕಥೆಗಳಲ್ಲಿ ಪುರುಷರ ದೌರ್ಜನ್ಯವನ್ನು ವಿರೋಧವನ್ನು ಹೆಣ್ಣಿನ ತಾಯ್ತನದ ಹಕ್ಕನ್ನು ಸ್ವತಂತ್ರವಾಗಿ ಆಯ್ದುಕೊಳ್ಳುವ ಪರಿಯನ್ನು ಕಾಣಬಹುದಾಗಿದೆ. ಅವರ ಬಹುಪಾಲು ಕಥೆಗಳು ನವ್ಯದ ಪುರುಷ ಲೇಖಕರು ಚಿತ್ರಿಸುವ ಸ್ತ್ರೀ ಪಾತ್ರಗಳಿಗೆ ವಿರುದ್ಧವಾಗಿ ಹೆಣ್ಣನ್ನು ಚಿತ್ರಿಸಲಾಗಿದೆ. ಇಲ್ಲಿ ವೀಣಾ ಅವರು ಸಂಪ್ರದಾಯಿಕತೆಯಿಂದ ದೂರವಾಗಿ ಆಧುನಿಕ ಮಹಿಳಾ ಚಿತ್ರಣವನ್ನು ನೀಡಿದ್ದಾರೆ. ಇಲ್ಲಿನ ಕಥೆಗಳಲ್ಲಿ ಹೆಣ್ಣಿನ ಘನತೆಯನ್ನು ಬೇರೆ ಬೇರೆ ನೆಲೆಯಲ್ಲಿ ಚಿತ್ರಿಸಿದ್ದಾರೆ. ಅವರು ಆಧುನಿಕ ಮಹಿಳೆಯರ ಅಂತರಂಗ ಹಾಗೂ ಅನುಭವಗಳು ಯಶಸ್ವಿಯಾಗಿ ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ.

ವೀಣಾ ಅವರ ಕಥೆಗಳಲ್ಲಿ ಕಾಣಿಸಿಕೊಂಡ ನವ್ಯತೆ, ಒಂದು ಕೇಂದ್ರ ಪ್ರತಿಮೆಯ ಸುತ್ತ ಕತೆ ಹೆಣೆಯುವ ಕಲೆ, ಅನುಭವವನ್ನು ಎದುರಿಸುವ ದಿಟ್ಟತನ, ತೀಕ್ಷ್ಣ ಕಲಾಪ್ರಜ್ಞೆ, ಭಾಷೆಯ ಮೇಲಿನ ಸಹಜ ಪ್ರಭುತ್ವ ಇವುಗಳತ್ತ ಓದುಗರ ಗಮನವನ್ನು ಸೆಳೆಯುತ್ತದೆ.

ನವ್ಯದ ಕಥೆಗಾರ್ತಿಯರಲ್ಲಿ ರಾಜಲಕ್ಷ್ಮಿ ಪ್ರಮುಖರಾಗಿದ್ದಾರೆ. ಅವರು 'ಸಂಗಮ' ಎಂಬ ಕಥಾಸಂಕಲನವನ್ನು ರಚಿಸಿದ್ದಾರೆ. ಅವರ ಎಲ್ಲಾ ಕಥೆಗಳಲ್ಲಿ ವ್ಯಕ್ತಿಯ ಮನಸ್ಸಿನ ನರಳಾಟ, ನೋವುಗಳು ವಸ್ತುವಾಗಿ ಮೂಡಿ ಬಂದಿದೆ. ಅವರ 'ಕಲ್ಯಾಣ' ಕಥೆಯಲ್ಲಿ ಮೂವರು ಪುರುಷರು ಬಂದು ಹೆಣ್ಣನ್ನು ನೋಡುವ ಕ್ರಮಕ್ಕೂ ಹೆಣ್ಣೊಬ್ಬಳು ಗಂಡನ್ನು ಅಪೂರ್ಣವಾಗಿ ಕಂಡು ಯಾರನ್ನು ಒಪ್ಪಿಕೊಳ್ಳದೆ ತಿರಸ್ಕರಿಸುತ್ತಾಳೆ. ಅವರ ಕಥೆಯಲ್ಲಿ ಹೆಣ್ಣಿಗೆ ತನ್ನದೇ ಆದ ವ್ಯಕ್ತಿತ್ವವಿದ್ದು ಪುರುಷರ ದೌರ್ಬಲ್ಯ, ಕೊರತೆಯನ್ನು ಕಂಡುಹಿಡಿಯಲು ಸಮರ್ಥಳಾಗಿದ್ದಾಳೆ. ಇಲ್ಲಿ ಸ್ತ್ರೀಯ ಅಸ್ಥಿತ್ವವನ್ನು ಗುರುತಿಸಿದ್ದಾರೆ. ಅವರ 'ಪ್ರೀಡಾ' ಕಥೆಯಲ್ಲಿ ವಿವಾಹೇತರ ಕಾಮಕ್ಕೆ ಒಳಗಾದ ಮಹಿಳೆಯ ಆಂತರಿಕ ತೊಳಲಾಟದ ಚಿತ್ರಣ ಮುಖ್ಯವಾಗಿದೆ. ಅವರ ಪ್ರಮುಖ ಕಥೆ 'ಇಲ್ಲ ಇಲ್ಲ' ಕಥೆಯಲ್ಲಿ ಒಬ್ಬನನ್ನು ಪ್ರೀತಿಸಿ, ಮತ್ತೊಬ್ಬನನ್ನು ಮದುವೆಯಾದ ಹೆಣ್ಣಿನ ಚಿತ್ರಣ ಈ ಕತೆಯ ವಸ್ತುವಾಗಿದೆ. ಇಲ್ಲಿ ಸ್ವಾತಂತ್ರ್ಯ ನಂತರ ಭಾರತೀಯರು ಭ್ರಮನಿರಸತೆಗೆ ಒಳಗಾಗಿ ದುರಂತತೆಯನ್ನು ಕುರಿತು ಹೇಳುತ್ತದೆ. ಒಟ್ಟಾರೆ 'ಸಂಗಮ' ಕಥೆಯಲ್ಲಿ ಗಂಡಿನ ಅನುಮಾನ, ಸಂಶಯ ಪ್ರವೃತ್ತಿಗಳು ಕಥೆಯ ವಸ್ತುವಾಗಿದ್ದರೆ,

'ನನಗೊಂದು ಬಿಳಿ ಗುಲಾಬಿ' ಕಥೆಯಲ್ಲಿ ಹೆಣ್ಣಿನ ಸಂಕಷ್ಟ, ಮಾನಸಿಕ ತಲ್ಲಣವನ್ನು ಗುರುತಿಸಲಾಗಿದೆ. ಹೀಗೆ ಅವರ ಕಥೆಗಳಲ್ಲಿ ಹೆಣ್ಣಿನ ಅಸಹಾಯಕತೆ, ಹತಾಶೆ ಕಥೆಯಲ್ಲಿ ಗುರುತಿಸಲಾಗಿದೆ.

ಪ್ರಗತಿಶೀಲ ಸಾಹಿತ್ಯ ಈ ಕಾಲಾವಧಿಯಲ್ಲಿ ವೇಶ್ಯೆಯರ, ವಿಧವೆಯರು, ಭೀಕ್ಷುಕಿಯರು, ಹೆಣ್ಣು ಜೀತದಾಳುಗಳು, ಸ್ತ್ರೀ ಕಾರ್ಮಿಕರು, ವೈವಾಹಿಕ ಚೌಕಟ್ಟಿನಾಚೆಗಿರುವ ಅತೃಪ್ತಗೃಹಿಣಿಯರು ಪ್ರಗತಿಶೀಲದ ಕಥಾವಸ್ತುವಾಗಿದೆ. ಇಲ್ಲಿ ಹೆಣ್ಣಿನ ಶೋಷಣೆ ಮುಖ್ಯವಸ್ತುವಾಗಿ ಕಂಡುಬಂದಿದೆ. ಈ ಸಂದರ್ಭದಲ್ಲಿ ಪ್ರಗತಿಶೀಲ ಲೇಖಕರಾದ ಸಮಕಾಲಿನರಾದ ಲೇಖಕಿಯರು ಅನೇಕ ಕಥೆಗಳನ್ನು ರಚಿಸಿದ್ದಾರೆ. ಈ ಕಥೆಗಾರ್ತಿಯರು ಮಧ್ಯಮ ವರ್ಗದ ಹೆಣ್ಣು ಕುಟುಂಬದ ಚೌಕಟ್ಟಿನೊಳಗೆಯಿರುವ ಸ್ತ್ರೀ ಸಂವೇದನೆಗಳನ್ನು ಕುರಿತು ಚಿಂತಿಸಲಾಗಿದೆ. ಹಾಗೂ ಪುರುಷ ಪ್ರಧಾನ ವ್ಯವಸ್ಥೆಯ ವಿರೋಧ ಹಾಗೂ ಅಸಮಾನ ಆರ್ಥಿಕ ವ್ಯವಸ್ಥೆಯಡಿಯಲ್ಲಿ ಬಲಿಯಾಗುವ ಹೆಣ್ಣಿನ ಸಮಸ್ಯೆಗಳನ್ನು ಗುರುತಿಸಲಾಗಿದೆ. ಪ್ರಗತಿಶೀಲ ಸಾಹಿತ್ಯದಲ್ಲಿ ತ್ರಿವೇಣಿ, ಸಾವಿತ್ರಮ್ಮ, ಅನುಪಮಾ ನಿರಂಜನ, ವಾಣಿ, ಮುಂತಾದವರನ್ನು ಗುರುತಿಸಲಾಗಿದೆ.

ತ್ರಿವೇಣಿಯವರು ಪ್ರಗತಿಶೀಲ ಕಥೆಗಾರ್ತಿಯರಲ್ಲಿ ಪ್ರಮುಖರು. ತ್ರಿವೇಣಿಯವರು ಹೆಣ್ಣನ್ನೆ ಕೇಂದ್ರಬಿಂದು ಮಾಡಿಕೊಂಡು ಅವಳ ಆಸೆ ಆಕಾಂಕ್ಷೆ. ಶಕ್ತಿ ದೌರ್ಬಲ್ಯಗಳನ್ನು ತೋರಿಸಿದ್ದಾರೆ. ಹೆಣ್ಣಿನ ಮೇಲೆ ಗಂಡನಿಂದ ಅವ್ಯಕ್ತವಾಗಿ ಆಗುವ ದೌರ್ಜನ್ಯಗಳನ್ನು ಶೋಧಿಸಿದ್ದಾರೆ. ಹೆಣ್ಣನ್ನು ಸರಿಯಾದ ಕಣ್ಣಿನಿಂದ ನೋಡಬೇಕೆಂಬ ಸರಿಯಾದ ಹೃದಯದಿಂದ ಅರಿಯಬೇಕೆಂಬ ಒತ್ತಾಸೆ ತ್ರಿವೇಣಿಯವರದು. ದಾಂಪತ್ಯ ಸಮಸ್ಯೆಯನ್ನು ವಿಶ್ಲೇಷಣೆ ಮಾಡಿ ತ್ರಿವೇಣಿಯವರು ಬರೆದ "ಸೋತು ಗೆದ್ದವಳು", 'ಶರಪಂಜರ', ಕಾದಂಬರಿಗಳಲ್ಲಿ ಮಹಿಳೆಯರ ಸಹಾನುಭೂತಿ ಇದೆ. 'ಬೆಕ್ಕಿನ ಕಣ್ಣು'ನಲ್ಲಿ ವೈಜ್ಞಾನಿಕ, ಮನೋವೈಜ್ಞಾನಿಕ ಒಳನೋಟಗಳನ್ನು ನೋಡಬಹುದು. ಅವರ ಕಥಾಸಂಕಲನಗಳೆಂದರೆ 'ಎರಡು ಮನಸ್ಸು' 'ಹೆಂಡತಿಯ ಹೆಸರು', 'ಸಮಸ್ಯೆಯ ಮಗು', ಕೊನೆಯ ನಿರ್ಧಾರ' ಸಂಕಲನಗಳನ್ನು ರಚಿಸಿದ್ದಾರೆ. ಅವರ ಕಥೆಗಳಲ್ಲಿ ಲಿಂಗಬೇದ ನೀತಿಯ ವಿರೋಧವನ್ನು ಪ್ರಶ್ನಿಸಲಾಗಿದೆ. ಅವರ ಕಥೆಗಳನ್ನು ಮನೋವಿಶ್ಲೇಷಣಾತ್ಮಕ, ಕೌಟುಂಬಿಕ, ಸಾಮಾಜಿಕ ಕಥೆಗಳೆಂದು ಗುರುತಿಸಲಾಗಿದೆ. ಅವರ ಮೊದಲ ಕಥಾಸಂಕಲನದ 'ಹೆಂಡತಿಯ ಹೆಸರು' ಕಥೆಯಲ್ಲಿ ಹೆಣ್ಣಿನ ಒಳಮನಸ್ಸು ಸಂವೇದನೆಯ ಸೂಕ್ಷ್ಮತೆಗಳನ್ನು ಚಿತ್ರಿಸಿದ್ದಾರೆ. ತ್ರಿವೇಣಿಯವರ ಎಲ್ಲಾ ಕಾದಂಬರಿಗಳ ಮುಖ್ಯ ಸಂವಿಧಾನವೇ ವಿವಾಹ. ಇವರ ಕತೆ, ಕಾದಂಬರಿಗಳಲ್ಲಿ ಹೆಣ್ಣಿನ ವಿವಿಧ ಅವಸ್ಥೆಗಳ ಪ್ರಾಮಾಣಿಕವಾದ ಹಾಗೂ ಕಳಕಳಿಯಿಂದ ತುಂಬಿದ ಚಿತ್ರಗಳಿವೆ. ವೇಶ್ಯಾ ಸಮಸ್ಯೆಯನ್ನು ಸೂಕ್ಷ್ಮವಾಗಿ ಸಹೃದಯತೆಯಿಂದ ತ್ರಿವೇಣಿಯವರು ಚಿತ್ರಿಸಿದ್ದಾರೆ.

ಹೀಗೆ ಇವರ ಕಥೆಗಳಲ್ಲಿ ನಾಯಕಿ ಸ್ವತಂತ್ರ ಬದುಕಿನ ಹುಡುಕಾಟದಲ್ಲಿರುತ್ತಾಳೆ. ಇಲ್ಲಿನ ಪಾತ್ರಗಳು ಆತ್ಮವಿಶ್ವಾಸದಿಂದ ಕೂಡಿದ್ದು, ಅವರ ಮುಂದೆ ಪುರುಷ ಪಾತ್ರಗಳ ಸೋಲನ್ನು

ಕಾಣಬಹುದಾಗಿದೆ. ಇದಕ್ಕೆ 'ಬೆಡ್ ನಂ–೭' ಕಥೆಯು ನಿದರ್ಶನವಾಗಿದೆ. ಒಟ್ಟಾರೆ ತ್ರಿವೇಣಿಯವರ ಕಥೆಗಳು ಸ್ತ್ರೀಯ ಪ್ರವಸದ ಸಮಸ್ಯೆ, ಸ್ವಾತಂತ್ರ, ಸಮಾನತೆಯ ತುಡಿತ, ವಿದೇಶದ ವ್ಯಾಮೋಹ ಪ್ರಮುಖ ವಸ್ತುವಾಗಿರುತ್ತದೆ.

ನವೋದಯ ಕತೆಗಾರ್ತಿಯವರಿಗೆ ಹೋಲಿಸಿದರೆ ಪ್ರಗತಿಶೀಲ ಕಥೆಗಾರ್ತಿಯರು ಸ್ತ್ರೀ ಪರಿಕಲ್ಪನೆಯಲ್ಲಿ ಗಮನಾರ್ಹ ಬೆಳವಣಿಗೆಯನ್ನು ಕಾಣಬಹುದಾಗಿದೆ. ಸುಶೀಲಕೊಪ್ಪರ ಹಾಗೂ ತ್ರಿವೇಣಿಯವರು ಹೊರತುಪಡೆಸಿ ಉಳಿದ ಕಥೆಗಾರ್ತಿಯರು ಸಾಂಸಾರಿಕ ಚಿತ್ರಣವು ಪ್ರಮುಖ ವಸ್ತುವಾಗಿ ಕಾಣುತ್ತದೆ.

ಎಚ್. ವಿ. ಸಾವಿತ್ರಮ್ಮನವರ 'ಒಂದು ಪ್ರಕರಣ' ಈ ಕಥೆಯಲ್ಲಿ ಗಂಡು –ಹೆಣ್ಣಿನ ದ್ವಂದ್ವಾತ್ಮಕ ಸಂಬಂಧಗಳಿಗೆ ಸಾಂಸ್ಕೃತಿಕ ಮುಖಾಮುಖಿಯು ನಿರ್ಮಿಸುವ ಮೂಲಕ ವೈಶಿಷ್ಟಪೂರ್ಣವಾಗಿದೆ. ಈ ಕಥೆಯ ದೃಷ್ಟಿಕೋನ ಗ್ರೇಸ್‌ಳಲ್ಲಿ ಮಾತ್ರ ಕೇಂದ್ರಿತವಾಘಿಲ್ಲ. ಅದು ಬದಲಾಗುವ ಧೃಷ್ಟಿಕೋನ ಹೀಗಿದ್ದರೂ ನಿಜವಾದ ಸಾಂಕೇತಿಕತೆಯಿರುವುದು ಗ್ರೀಸ್‌ಳ ಪಾತ್ರದಲ್ಲಿಯೇ ಪಾಶ್ಚಾತ್ಯ ಸಂಸ್ಕೃತಿಯ ಮೌಲ್ಯಗಳನ್ನು ಅಳವಡಿಸಿಕೊಂಡ ಗ್ರೇಸ್ ತನ್ನ ಬೇರೆ ಸಂಸ್ಕೃತಿಯಿಂದ ಬಂದ ಮಾಧೂನ ಸಂಬಂಧವನ್ನು ನಿರ್ವಹಿಸುವ ರೀತಿ ಭಾರತೀಯ ಸ್ತ್ರೀಯ ರೀತಿಯಿಂದ ಸ್ಪಷ್ಟವಾಗಿ ಬೇರೆಯಾಗಿದೆ. ಮಾಧುವಿಗೆ ಭಾರತದಲ್ಲಿ ಹೆಂಡತಿ ಮಕ್ಕಳಿದ್ದಾರೆಂದು ಗೊತ್ತಿದ್ದೂ ಗ್ರೀಸ್ ಅವಳೊಡನೆ ಲೈಂಗಿಕ ಸಂಬಂಧ ಬೆಳೆಸಿಕೊಳ್ಳುತ್ತಾಳೆ. ಈ ಸಂಬಂಧ ಶಾಶ್ವತವಾದುದಲ್ಲ ಎಂಬ ಅರಿವು ಅವಳಲ್ಲಿದ್ದರೂ ಅದು ಅವಳು ಅದರಿಂದ ಪಡೆಯುವ ತೃಪ್ತಿ, ಸಂತೋಷಗಳನ್ನು ಕಡಿಮೆ ಮಾಡುವುದಿಲ್ಲ. ಈ ಸಂಬಂಧ ಕೊನೆಗೊಂಡಾಗ ಅವಳಿಗೆ ದುಃಖವಾದರೂ ಅವಳು ಈ ಅನುಭವವನ್ನು ಧೈರ್ಯವಾಗಿ ಎದುರಿಸಬಲ್ಲಳು. ಮಾಧುವಿಗೆ ನೋವಾಗಬಾರದೆಂಬ ಉದ್ದೇಶದಿಂದ ಅವಳು ಅವನಿಗೆ ತನ್ನ ಬಗ್ಗೆ ಸುಳ್ಳು ಸುದ್ದಿಯನ್ನು ಕೊಡುವುದರಲ್ಲಿ ಅವಳ ಪಾತ್ರದ ಅತಿಯಾದ ಆದರ್ಶಿಕರಣಯೆಂದೆನೆಸಿದರೂ ಅವಳು ಹೊಂದಿದ ಸಂಸ್ಕೃತಿಯ ಸಂದರ್ಭದಲ್ಲಿ ಅದು ತೀರಾ ಸಹಜವೆಂದು ಕಾಣುವುದಿಲ್ಲ. ಈ ಕತೆಯಲ್ಲಿ ನಿಜವಾಗಿಯೂ ಸಮಸ್ಯಾತ್ಮಕ ಅನುಭವಕ್ಕೆ ಒಳಗಾಗುವ ಮಾಧು. ಆದರೆ ಅವನ ಪಾಪಪ್ರಜ್ಞೆಯಾಗಲಿ, ಮಾನಸಿಕ ಗೊಂದಲವಾಗಲಿ ಹೊಸ ಅಂಶಗಳಲ್ಲ.

ಇಲ್ಲಿನ ಕಥೆಗಳಲ್ಲಿ ಘನತೆಯನ್ನು ಬೇರೆ ಬೇರೆ ನೆಲೆಯಲ್ಲಿ ಚಿತ್ರಿಸಿದ್ದಾರೆ. ಅವರು ಆಧುನಿಕ ಮಹಿಳೆಯರ ಅಂತರಂಗ ಹಾಗೂ ಅನುಭವಗಳು ಯಶಸ್ವಿಯಾಗಿ ತಮ್ಮ ಕಥೆ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಅನುಪಮಾ ನಿರಂಜನರು ಪ್ರಗತಿಶೀಲ ಸಾಹಿತ್ಯದ ಕಥೆ ಮತ್ತು ಕಾದಂಬರಿಯಲ್ಲಿ ಪ್ರಮುಖರಾದವರು ಇವರ ಕಥಾ ಸಂಕಲನಗಳೆಂದರೆ 'ಕಣ್ಮಣಿ', 'ರುವಾರಿಯ ಲಕ್ಷ್ಮೀ', ನೀರಿಗೆ

ನೈದಿಲೆ ಶೃಂಗಾರ', ಗಿರಿಧಾಮ' ಇತ್ಯಾದಿ ಕಥಾ ಸಂಕಲನಗಳನ್ನು ರಚಿಸಿದ್ದಾರೆ. 'ರುವಾರಿಯ ಲಕ್ಷ್ಮೀ'ಯು ಐತಿಹಾಸಿಕ ವಸ್ತುವನ್ನು ಒಳಗೊಂಡಿದ್ದು ಆಳುವ ವರ್ಗದ ದೌರ್ಜನ್ಯ, ದುಡಿಯುವ ವರ್ಗದ ಅಸಾಹಯಕತೆಯನ್ನು ಹೆಣ್ಣಿನ ಶೋಷಣೆಯನ್ನು ಕುರಿತು ಹೇಳುತ್ತದೆ. ಇವರ ಎಲ್ಲಾ ಕಾದಂಬರಿಗಳಲ್ಲಿ ವಿವಾಹ ಪ್ರಖರವಾಗಿ ಸಂಘರ್ಷಕ್ಕೆ ಗುರಿಯಾಗುವ ಸಾದ್ಯತೆಗಳಿರುತ್ತವೆ. ಇದರ ಎಲ್ಲಾ ಸಾಧ್ಯತೆಗಳನ್ನು ಉತ್ಖನನ ಮಾಡುವ ಪ್ರಯತ್ನ ಇವರ ಕಾದಂಬರಿಗಳ ಕೇಂದ್ರ ಧಾರಿಯಾಗುತ್ತದೆ. ಕಾದಂಬರಿಗಳೆಂದರೆ 'ಅನಂತಗೀತೆ', 'ಶ್ವೇತಾಂಬರಿ', 'ಸ್ನೇಹಪಲ್ಲವಿ', 'ಹಿಮದ ಹೂ', 'ಆಳ' ಮುಂತಾದ ಕಾದಂಬರಿಗಳಲ್ಲಿ ವಿವಾಹದ ನೆಲಗಟ್ಟಿನ ಸಮಸ್ಯೆಗಳನ್ನು ಹಲವು ಮೂಲಗಳಿಂದ ಬಿಡಿಸುವ ಪ್ರಯತ್ನವನ್ನು ನಡೆಸುತ್ತದೆ.

ಇವರ ಕಥಾಸಂಕಲನವೆಂದರೆ 'ಒಂದು ಘಟನೆ ಹಾಗೂ ಅನಂತರ' ಕತೆಯಲ್ಲಿ ಸ್ತ್ರೀಯ ದಿಟ್ಟತನವನ್ನು ತೋರುತ್ತಾರೆ. ಇಲ್ಲಿ ವಿವಾಹಿತ ಹೆಣ್ಣು ಅತ್ಯಾಚಾರಕ್ಕೊಳಗಾಗಿದ್ದು ಇದಕ್ಕೆ ಗಂಡನೇ ಜವಾಬ್ದಾರನಾಗಿರುತ್ತಾನೆ. ಈ ಪ್ರಕರಣದ ನಂತರ ಹೆಂಡತಿಯನ್ನು ಸ್ವೀಕರಿಸಲು ಸಂಪ್ರದಾಯಿಕ ಮನೋಧರ್ಮ ಎದುರಾಗಿ ಅವಳನ್ನು ತಿರಸ್ಕರಿಸುತ್ತಾನೆ. ಹೆಂಡತಿಯನ್ನು ರಕ್ಷಿಸಲಾಗದ ಇವನು ಗಂಡನೋ? ಎಂಬ ಪ್ರಶ್ನೆಯು 'ಹಂಗು ಇಲ್ಲದ ಬದುಕು'ನ್ನು ಹುಡುಕಿಕೊಂಡು ಮನೆಯಿಂದ ಹೊರಬೀಳುವ ನಿರ್ಧಾರದಿಂದ ಕಥೆಯು ಅಂತ್ಯವಾಗುತ್ತದೆ. ಹೀಗೆ ಇಲ್ಲಿನ ನಾಯಕಿಯರು ಸ್ವತಂತ್ರ ಬದುಕನ್ನು ದಿಟ್ಟತನವನ್ನು ಕಾಣಲಾಗಿದೆ. ಅವರ 'ಸುವರ್ಣ ರೇಖೆ' ಕಾರ್ಮಿಕರ ಸಮಸ್ಯೆಗಳನ್ನು ಕುರಿತು ಚಿಂತಿಸುತ್ತಾರೆ. ಹೀಗೆ ಅವರ ಕಥೆಗಳು ಅತ್ಯಾಚಾರಕ್ಕೆ ಒಳಗಾದ ಮಹಿಳೆಯರು, ಬಂಜೆಯರ ಸಮಸ್ಯೆಗಳು, ಅವಿಭಕ್ತ ಕುಟುಂಬಗಳಲ್ಲಿ ಕಂಡುಬರುವ ಸಮಸ್ಯೆಗಳಲ್ಲಿ ವರಾನ್ವೇಷಣೆಯಲ್ಲಿ ಪ್ರದರ್ಶನಕ್ಕೆ ಕುಳಿತು ಅವಮಾನಿತರಾಗುವ ಹುಡುಗಿಯರು, ಅವಿವಾಹಿತ ಹೆಣ್ಣಿನ ಸಮಸ್ಯೆಗಳು ಹೀಗೆ ಹೆಣ್ಣಿನ ಹತ್ತು ಹಲವು ಕಥೆಗಳಲ್ಲಿ ಚಿತ್ರಿಸಲಾಗಿದೆ. 'ಹಂಗು ಇಲ್ಲದ ಬದುಕು' ಎನ್ನುವ ಕಥೆಯಲ್ಲಿ ಸಂಬಂಧಗಳ ಅರ್ಥವೇನು? ಎನ್ನುವ ಪ್ರಶ್ನೆ ಈ ಕತೆಯ ಕೆಂದ್ರದಲ್ಲಿದೆ.

ಎಪ್ಪತ್ತರ ದಶಕದಲ್ಲಿ ನಡೆದ ಹೋರಾಟಗಳು ದೇಶದ ರಾಜಕೀಯ, ಸಾಮಾಜಿಕ ಬದುಕಿನಲ್ಲಿ ಉಂಟಾದ ಬದಲಾವಣೆ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಯಾದ ಪರಿಣಾಮ ದಲಿತ ಮುಸ್ಲಿಂ, ಬಂಡಾಯ ಸಾಹಿತ್ಯ ಪರಂಪರೆ ಆರಂಭವಾಯಿತು. ಈ ಪರಂಪರೆಯಲ್ಲಿ ಶೋಷಿತ ಕೆಳವರ್ಗದ ಸ್ಥಿತಿಯ ಬದಲಾವಣೆಯ ಆಶಯವನ್ನು ಈ ಸಾಹಿತ್ಯ ಪ್ರತಿಪಾದಿಸಿತು. ಈ ಸಾಹಿತ್ಯದ ದಟ್ಟ ಪ್ರಭಾವ ಲೇಖಕ, ಲೇಖಕಿಯರ ಮೇಲೆ ಉಂಟಾದ ಕೆಳವರ್ಗದಿಂದ ಬಂದ ಮಹಿಳೆಯರು ತಾವು ಕಂಡು ಕೇಳಿದ ಅನುಭವಗಳನ್ನು ಬರಹಗಳ ಮೂಲಕ ಪ್ರತಿಪಾದಿಸಿದ್ದಾರೆ.

ದಲಿತ ಬಂಡಾಯ ಸಾಹಿತ್ಯದ ಮುಖ್ಯ ಆಶಯ ನೊಂದವರ ಅವಮಾನಕ್ಕೆ ಒಳಗಾದವರ, ಅತ್ಯಂತ ಕೆಳವರ್ಗದ ಜನರ ಪರವಾಗಿದೆ. ಆರ್ಥಿಕ ಸಾಮಾಜಿಕ, ರಾಜಕಿಯ ಶೋಷಣೆಗೆ ಒಳಗಾದವರ ದನಿಯಾಗಿದೆ. "ಖಡ್ಗವಾಗಲಿ ಕಾವ್ಯ, ಜನರ ನೋವಿಗೆ ಮಿಡಿಯುವ ಪ್ರಾಣಮಿತ್ರ" ಎಂಬುದು ಈ ಚಳುವಳಿಯ ಮುಖ್ಯ ಧ್ಯೇಯ ವಾಕ್ಯವಾಗಿದೆ. ಈ ನಿಟ್ಟಿನಲ್ಲಿ ಬರುವ ಪ್ರಮುಖ ಲೇಖಕಿಯರೆಂದರೆ ಗೀತನಾಗಭೂಷಣ, ಬಿ.ಟಿ. ಲಲಿತನಾಯಕ, ಬಾನು ಮುಷ್ತಾಕ, ಸಾರಾ ಅಬೂಬಕ್ಕರ್ ಮುಮ್ತಾಜ್ ಬೇಗಂ ಅವರ ಕೃತಿಗಳಿಗೆ ವಿಶಿಷ್ಟ ಸಮಾಜಗಳನ್ನು ಮೀರಿದ ಪ್ರಸ್ತುತೆಯಿದೆ.

ಈ ಅವಧಿಯ ಸಾಹಿತ್ಯದಲ್ಲಿ ದಲಿತರ ಶೋಷಣೆ, ಲೈಂಗಿಕತೆ, ಬಡತನ, ಹಸಿವು ಇವುಗಳನ್ನು ಹೃದಯಕ್ಕೆ ತಟ್ಟುವ ಹಾಗೆ ಕತೆ, ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಗೀತಾನಾಗಭೂಷಣವರ 'ಹಸಿಮಾಂಸ ಹಾಗೂ ಹದ್ದುಗಳು' ಕಾದಂಬರಿಯ ಲಚ್ಚಿ ಹರಯಕ್ಕೆ ಕಾಲಿಡುವುದೇ ತಡ ಸುತ್ತಲಿನ ಗಂಡುಗಳ ಕ್ರೌರ್ಯಕ್ಕೆ ವಂಚನೆಗೆ ತುತ್ತಾಗುತ್ತ ಬೆಳೆಯುತ್ತಾಳೆ. ಆದರೆ ಗಂಡುಗೂಳಿಗಳ ಆಕ್ರಮಣಕ್ಕೆ ಲಚ್ಚಿ ಪ್ರತಿಸಲ ಅಸಹಾಯಕತೆಯಿಂದ ಬಲಿಯಾಗುವುದಿಲ್ಲ. ಹೋರಾಡುತ್ತಾಳೆ, ಪ್ರತಿಭಟಿಸುತ್ತಾಳೆ. ಹಸಿಮಾಂಸಕ್ಕೆ ಎರಗುವ ಹದ್ದುಗಳನ್ನು ಲಚ್ಚಿ ಎಷ್ಟೇ ಒಡಿಸಿದರೂ ಪ್ರಕೃತಿ ಅವಳನ್ನು ಸೋಲಿಸುತ್ತದೆ. ಹುಟ್ಟುವ ಗಂಡುಮಗು, ಮುಂದೊಮ್ಮೆ ಹದ್ದಾಗಬಹುದೆಂದು ಹೆದರುವ ಈ ಹೆಣ್ಣು, ಮಗುವನ್ನು ಕೈಯಾರೆ ಕೊಲ್ಲುತ್ತದೆ. ಈ ಹೆಣ್ಣುಗಳು ಊಳಿಗಮಾನ್ಯ ವ್ಯವಸ್ಥೆಯ ಮೇಲುವರ್ಗದಿಂದ ಅನುಭವಿಸುವ ಲೈಂಗಿಕ, ಮಾನಸಿಕ ದೌರ್ಜನ್ಯಗಳ ವಿವಿಧ ಮುಖಗಳನ್ನು ಕಾಣಬಹುದು. ಶೂದ್ರ ಸಮುದಾಯದ ಕೆಳವರ್ಗದ ಹೆಣ್ಣಿನ ನೋವು, ಸಂಕಟ ಅಪಮಾನಗಳ ಸಮಸ್ಯೆಗಳನ್ನು ಅವರ ಕಥೆಗಳಲ್ಲಿ ಕಾಣಲಾಗಿದೆ. ಅವರ 'ಹುಲಗ್ಯಾ' ಕಥೆಯು ದಲಿತರ ಬದುಕಿನ ಚಿತ್ರಣವನ್ನು ನೀಡುತ್ತದೆ. ಇಲ್ಲಿಯ ದಲಿತ ಹೆಣ್ಣು ಮೇಲುವರ್ಗದವರ ಬೋಗ ವಸ್ತುವಾಗಿ ಅತ್ಯಾಚಾರಕ್ಕೆ ಒಳಗಾಗಿದ್ದಾಳೆ. ಮತ್ತೊಂದು ಕಥೆ 'ಗೌಡನ ಗೋರಿ' ಕಥೆಯು ಹೆಣ್ಣಿನ ತಾಯ್ತನದ ಹಂಬಲದ ಚಿತ್ರಣವನ್ನು ನೀಡುತ್ತದೆ. ಈ ಹಿನ್ನಲೆಯಲ್ಲಿ ಪರಮುರುಷನೊಂದಿಗೆ ಸಂಬಂಧ ಬೆಳೆಸಿ ಮಗುವನ್ನು ಪಡೆಯುವ ಹೆಣ್ಣಿನ ತಾಯ್ತನದ ಆಯ್ಕೆ ಸ್ವತಂತ್ರ ಮನೋಭಾವ ವ್ಯಕ್ತವಾಗಿದೆ. ಒಟ್ಟಾರೆ ಗೀತಾನಾಗಭೂಷಣರವರ ಕಥಾ ಸಾಹಿತ್ಯವು ಸಂಪ್ರದಾಯುಕದಿಂದ ದೂರವಾಗಿ ಸರಳವಾಗಿ ಜನಪದ ಮಾತಿನಲ್ಲಿ ಹೆಣ್ಣು ಗಂಡಿನ ಸಂಬಂಧಗಳನ್ನು ಇವರ ಸಾಹಿತ್ಯದಲ್ಲಿ ಚಿತ್ರಿಸಿದ್ದಾರೆ.

ಸ್ತ್ರೀ ಸಂವೇದನೆಯ ವಿವಿಧ ಸ್ತರಗಳನ್ನು ಈ ದಲಿತ – ಬಂಡಾಯ ಕಥೆಗಾರ್ತಿಯರಲ್ಲಿ ಗುರುತಿಸಬಹುದು. ಲಲಿತಾನಾಯಕರ 'ಲೂಟ' ಕಥೆಯಲ್ಲಿ ಕೆಳವರ್ಗದ ಸಂಸ್ಕೃತಿಯ ವಿವರಗಳು ಪ್ರಕಟವಾಗಿವೆ. ಈ ಕಥೆಯ ನಾಯಕಿ ರಾಮಿ ಪಡುವ ಯಾತನೆ ಭಾರತದ ಅಸಂಖ್ಯಾತ ಬಡ ಹೆಣ್ಣುಮಕ್ಕಳು ಪಡುವ ಸ್ಥಿತಿಯಾಗಿದೆ. ಗಂಡನ ಕಾಯಿಲೆಯ ಅಸಾಹಯಕತೆ ಕಂಡು ಮಕ್ಕಳ

ಹೊಟ್ಟೆತುಂಬಿಸುವ ಹಂಬಲ ಹೊತ್ತು ಕಾಡಿಗೆ ಹೋಗಿ ಸೌದೆ ತಂದು ಮಾರಲು ಹೋದ ಆಕೆಯ ಮೇಲೆ ಅತ್ಯಾಚಾರ ನಡೆಯುತ್ತದೆ. ಈ ಕಥೆಗೆ ವಿಶಿಷ್ಟವಾದ ಧ್ವನಿಶಕ್ತಿ ಇದೆ. 'ಹಬ್ಬ ಮತ್ತು ಬಲಿ' ಕಥೆಯಲ್ಲಿ ಕೆಳವರ್ಗದ ಸಂಸ್ಕೃತಿಯ ವಿವರಗಳಿವೆ. ಗ್ರಾಮೀಣ ಪರಿಸರದ ದಟ್ಟ ವರ್ಣನೆಯಿದೆ. ಊರಿನ ಜಾತ್ರೆಯಲ್ಲಿ ಸಂಭ್ರಮಿಸಿದ ಮನಸ್ಸುಗಳು ಮಾರನೆಯ ದಿನ ಒಂದು ಗೋಳಿನ ಸಂಗತಿಗೆ ಒಳಗಾಗುತ್ತಾನೆ. ಸಣ್ಣ ಊರಹಬ್ಬ ಮಾಡುವ ಸಲುವಾಗಿ ಸಾಲ ಮಾಡಿದ ದಲಿತ ವ್ಯಕ್ತಿ ಹಬ್ಬ ಮುಗಿದ ಮಾರನೇಯ ದಿನವೇ ಜೀತಕ್ಕೆ ಹೋಗಬೇಕಾದ ಶೋಚನೀಯ ಸ್ಥಿತಿಗೆ ಒಳಗಾಗುತ್ತದೆ. ಸಾಕಿಬಾಯಿ ಬದುಕಿನ ಸಮಾಜದಲ್ಲಿ ಇನ್ನೊಬ್ಬನೊಡನೆ ಇಟ್ಟುಕೊಂಡ ಲೈಂಗಿಕ ಸಂಬಂಧ ಅವಳ ಮಕ್ಕಳಿಗೆ ಅದು ಅಪರಾಧವೆನಿಸಿ ಅವರು ಅವಳನ್ನು, ಅವಳ ಪ್ರೇಮಿಯನ್ನು ಕೊಲೆ ಮಾಡುತ್ತಾರೆ. ಆಕೆ ಆ ಪ್ರಿಯಕರನ ಜೊತೆ ಓಡಿ ಹೋಗಬಹುದಿತ್ತು ಆದರೆ ಆಕೆ ಆತನ ಜೊತೆ ಓಡಿಹೋದರೆ ಅವನನ್ನು ಕಟ್ಟಿಕೊಂಡಿರುವ ಅವನ ರೋಗಿಷ್ಟ ಹೆಂಡತಿ ಮತ್ತು ಮದುವೆಗೆ ಬಂದಿರುವ ಅವನ ಮಗಳಿಗೆ ತೊಂದರೆಯಾಗುತ್ತದೆಂದು ನಿರಾಕರಿಸುತ್ತಾಳೆ. ಇಲ್ಲಿ ಗ್ರಾಮೀಣ ಜನರ ಮೌಢ್ಯತೆ, ಪ್ರಾಣಿ ಹಿಂಸೆಯನ್ನು ಕುರಿತು ಹೇಳಿದ್ದಾರೆ. ಅವರ 'ತಾಯಿ ಸಾಕಿಬಾಯಿ' ಕಥೆಯಲ್ಲಿ ಕೆಳಜಾತಿಯ ಹೆಣ್ಣಿನ ಶ್ರಮ ಜೀವನ ವ್ಯಕ್ತವಾಗಿದೆ. ಹೀಗೆ ಅವರ ಎಲ್ಲಾ ಕಥೆಗಳ ಸಮುದಾಯದಲ್ಲಿ ಹೆಣ್ಣಿನ ಶೋಷಣೆಯನ್ನು ಕುರಿತು ಚಿಂತಿಸಲಾಗಿದೆ.

ಬಿ.ಟಿ. ಜಾಹ್ನವಿ ಅವರ ಕಥೆಗಳು ದಲಿತರ ಬದುಕಿನ ಸ್ವವಿಮರ್ಶೆಗಳಿಗೆ ಉತ್ತಮ ಪ್ರತಿಮೆಗಳಾಗಿವೆ. ಆರ್ಥಿಕವಾಗಿ ಬಲಿಷ್ಟರಾದ ದಲಿತ ಕುಟುಂಬವೊಂದು ತನ್ನ ಜಾತಿಯವನೇ ಆದ ವ್ಯಕ್ತಿಯನ್ನು ನಡೆಸಿಕೊಳ್ಳುವ ರೀತಿ 'ಕಳ್ಳು-ಬಳ್ಳಿ' ಕಥೆಯಲ್ಲಿ ಪರಿಣಾಮಕಾರಿಯಾಗಿ ಬಂದಿದೆ. 'ವ್ಯಭಿಚಾರ' ಕಥೆಯಲ್ಲಿ ಮೊದಮೊದಲು ಒಬ್ಬಳು ವ್ಯಭಿಚಾರಣಿಯ ಬಗ್ಗೆ ಮತ್ತೊಂದು ಹೆಣ್ಣು ತಾಳಿದ ನಿಲುವನ್ನು ಬದಲಾಯಿಸಿಕೊಳ್ಳುವ ಬಗೆ ಅರ್ಥಪೂರ್ಣವಾಗಿದೆ. ಗಂಡಸಿನ ಸಣ್ಣತನದ ಮುಂದೆ ಆ ಹೆಂಗಸಿನ ವ್ಯಕ್ತಿತ್ವ ದೊಡ್ಡದಾಗುತ್ತದೆ. ನಮ್ಮ ಬಹುಪಾಲು ದಲಿತ ಲೇಖಕಿಯರು ಈ ಪ್ರಶ್ನೆಯನ್ನು ಕೇಳಿಕೊಂಡಿದ್ದು ಕಡಿಮೆ. ಜಾಹ್ನವಿ ಅವರ ಕಥೆಗಳು ದಲಿತರಲ್ಲಿಯೇ ಇರುವ ಮೇಲು-ಕೀಳು, ಬಲಿಷ್ಟ-ಕನಿಷ್ಟ ಸಂಬಂಧಗಳನ್ನು ಶೋಧನೆಗೆ ಒಳಗು ಮಾಡುತ್ತದೆ. 'ವಿಮುಖ' ಕಥೆಯಲ್ಲಿ ಗಂಡು ಹೆಣ್ಣಿನ ನಡುವೆ ಸಂಭವಿಸುವ ಪ್ರೇಮ, ಮದುವೆ, ಆತ್ಮನಿರೀಕ್ಷೆಗಳು ಪ್ರಕಟವಾಗುತ್ತವೆ. ಜಾಹ್ನವಿ ಅವರ ಭಾಷೆ ಏಕಕಾಲಕ್ಕೆ ವಸ್ತು, ಪರಿಸರ, ಪಾತ್ರಕ್ಕೆ ಅನುಗುಣವಾಗಿ ನಿರೂಪಣೆ, ಸಂಭಾಷಣೆಯಲ್ಲಿ ಬದಲಾಗಬಲ್ಲದು. ದಲಿತ ಕಥಾಸಾಹಿತ್ಯಕ್ಕೆ ಪ್ರಾದೇಶಿಕತೆ ಮತ್ತು ಜನಪದೀಯ ನುಡಿಗಟ್ಟು ಒಲಿದು ಬಂದ ಬಗೆಗೆ ಇಂತಹ ಕಥೆಗಳು ಮಾಹಿತಿಯಾಗಬಲ್ಲವು.

ಕಥೆಗಾರ/ ಕಥೆಗಾರ್ತಿಯರು ಮುಸ್ಲಿಂ ಸಮುದಾಯದ ವಿಶಿಷ್ಟ ಸಂಪ್ರದಾಯ, ಆಚರಣೆ, ಧರ್ಮ, ನಂಬಿಕೆ, ಮುಗ್ಧತೆ, ದ್ವೇಷ, ಅಸೂಯೆ, ಕ್ರೌರ್ಯ ಹಾಗೂ ಸ್ತ್ರೀಲೋಕದ ಬಗೆಗಿನ ನಿಷಿದ್ಧತೆ

ಇತ್ಯಾದಿಗಳನ್ನು ತಮ್ಮ ಕಥೆಗಳ ಮೂಲಕ ವಿವರಿಸಿದ್ದಾರೆ. ಧರ್ಮಾಂಧತೆ ಮತ್ತು ಅಮಾನವೀಯ ನಡವಳಿಕೆಗಳನ್ನು ಪ್ರಶ್ನಿಸುವ ಕೆಲಸವನ್ನು ಈ ಲೇಖಕರು ದಿಟ್ಟತನದಿಂದ ನಿರ್ವಹಿಸಿದ್ದಾರೆ.

ಮುಸ್ಲಿಂ ಮಹಿಳೆಯರ ಒಳ ಜಗತ್ತನ್ನು ಪರಿಚಯಿಸಿದ ಪ್ರಥಮ ಲೇಖಕಿ ಸಾರಾ ಅಬೂಬಕ್ಕರ್ ಅವರು 'ಚಪ್ಪಲಿಗಳು', ಪಯಣ ಮತ್ತು ಇತರ ಕಥೆಗಳು', ಖೆಡ್ಡಾ' ಮುಂತಾದ ಸಂಕಲನಗಳನ್ನು ರಚಿಸಿದ್ದಾರೆ. ಸಾರಾ ಅವರ ಕಥೆಗಳಲ್ಲಿ ಕಾಸರಗೋಡು ಪ್ರದೇಶದ ಬ್ಯಾರಿ ಸಮುದಾಯದ ಸಾಂಸ್ಕೃತಿಕ ಚಿತ್ರಣವಿದೆ. ಅವರ ಕಥೆಗಳು ಮುಸ್ಲಿಂ ಮಹಿಳೆ ಎದುರಿಸುವ ಸಮಸ್ಯೆಗಳಾದ ತಲಾಕ್ ಪದ್ಧತಿ, ಬಹುಪತ್ನಿತ್ವ, ಬಹುಸಂತಾನ, ಬುರ್ಖಾ ಪದ್ಧತಿಯ ಮೂಲಕ ಮುಸ್ಲಿಂ ಮಹಿಳೆಯ ಮೇಲೆ ಪುರುಷರು ನಡೆಸುವ ಶೋಷಣೆಯನ್ನು ಕುರಿತು ಚರ್ಚಿಸಿದ್ದಾರೆ. ಮುಸ್ಲಿಂ ಹೆಣ್ಣಿಗೆ ವಿದ್ಯೆ ನಿಷಿದ್ಧ ಎನ್ನುವ ಸಾಮಾಜಿಕ ವ್ಯವಸ್ಥೆಯಲ್ಲಿ ಮುಸ್ಲಿಂ ಬಾಲೆ ದಿಟ್ಟತನದಿಂದ ವಿದ್ಯೆಕಲಿಯಲು ಮುಂದಾಗ ಎದುರಿಸುವ ಸಮಸ್ಯೆಗಳನ್ನು 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಕಥೆಯಲ್ಲಿ ಕಾಣಲಾಗಿದೆ.

ಅವರ 'ಚಪ್ಪಲಿಗಳು' ಕಥೆಯು ಮುಸ್ಲಿಂ ಸಮುದಾಯದಲ್ಲಿನ ಗಂಡ ಹಂಡತಿಯ ಸಂಬಂಧದ ಸೌಹಾರ್ದ, ಪ್ರೀತಿ, ಗೌರವಗಳಿಂದ ಕೂಡಿದ್ದು ಮತ್ತೊಂದೆಡೆ ಚಪ್ಪಲಿಗಳು ಹಳೆಯದಾದಂತೆ ಬೇರೆ ಬೇರೆ ಹೊಸ ಚಪ್ಪಲಿಗಳಿಗಾಗಿ ಆಸೆಪಡುವ ಪುರುಷ ವರ್ಗದ ಚಂಚಲತೆ, ಇಂತಹ ವ್ಯವಸ್ಥೆ, ನಂಬಿಕೆಯಡಿಯಲ್ಲಿ ಹುದುಗಿರುವ ಹೆಣ್ಣಿನ ಅಸಹಾಯಕತೆಯನ್ನು ಈ ಕಥೆಯಲ್ಲಿ ಚಿತ್ರಿಸುತ್ತದೆ. ಅವರ 'ಪಯಣ' ಸಂಗ್ರಹದ 'ಅಂಕುರ' ಕಥೆಯು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ಶಂಕಿಸುವ ಹಾಗೂ ಲೈಂಗಿಕ ನಿಯಂತ್ರಣದಲ್ಲಿಡುವ ಮೂಲಕ ಹೆಣ್ಣು ಅನುಭವಿಸುವ ಕೌಟುಂಬಿಕ ಹಿಂಸೆಯನ್ನು ಕುರಿತು ಹೇಳುತ್ತದೆ. ಅವರ ಪಯಣ ಕಥೆಯಲ್ಲಿ ಹೆಣ್ಣಿನ ಅಭದ್ರತೆ ಹಾಗೂ ಅತಂತ್ರ ಸ್ಥಿತಿಯ ದಟ್ಟ ಚಿತ್ರಣವಿದೆ. ಅವರ 'ಗಗನಸಖಿ' ಕಥೆಯಲ್ಲಿ ಗಂಡನ ಸಂಶಯ ಪ್ರವೃತ್ತಿಯಿಂದಾಗಿ ಹೆಂಡತಿಯೊಬ್ಬಳು ಅನುಭವಿಸುವ ಮಾನಸಿಕ ಚಿತ್ರಹಿಂಸೆ ಹಾಗೂ ಆಕೆ ಕಂಡುಕೊಂಡ ಪರಿಹಾರ ಈ ಕತೆಯ ವಸ್ತುವಾಗಿದೆ. ಅವರ ಮತ್ತೊಂದು ಕಥೆ 'ಧರ್ಮ ಬಲೆ ಬೀಸಿದಾಗ' ಈ ಕತೆಯ ನಾಯಕಿ ಖತೀಜಾ ಜಮಾತನ್ನೇ ತನ್ನ ಅಧೀನದಲ್ಲಿಟ್ಟುಕೊಂಡು ಇಬ್ರಾಹಿಮ್ ಹಾಜಿಯನ್ನು ಎದುರಿಸಿದ ಹೆಣ್ಣಿನ ಕ್ರಿಯಾಶೀಲ ವ್ಯಕ್ತಿತ್ವವನ್ನು ಕುರಿತು ಹೇಳುತ್ತದೆ. ಹೀಗೆ ಸಾರಾ ಅವರ ಎಲ್ಲಾ ಕಥೆಗಳು ಮುಸ್ಲಿಂ ಸಮುದಾಯದಲ್ಲಿನ ತಲಾಖ್ ಬಹುಪತ್ನಿತ್ವದಂಥ ಅಮಾನವೀಯ ಸಮಸ್ಯೆಗಳನ್ನು ಗಂಭೀರವಾಗಿ ಚಿಂತಿಸಿ, ಆ ಮೂಲಕ ಮಹಿಳೆಯರಿಗೆ ಇಂತಹ ಅನ್ಯಾಯ ಶೋಷಣೆ ವಿರುದ್ಧ ಪ್ರತಿಭಟಿಸುವ ಮನೋಭಾವನೆಯನ್ನು ಸ್ತ್ರೀಯರಲ್ಲಿ ಒಡಮೂಡಿಸಿದ್ದಾರೆ. ಸಾರಾ ಮುಸ್ಲಿಂ ಸ್ತ್ರೀಯರ ಅಭದ್ರ ವೈವಾಹಿಕ ಜೀವನ, ವಿಚ್ಛೇದನ ಸಮಸ್ಯೆ, ಅನಕ್ಷರತೆ, ಧಾರ್ಮಿಕ ನಂಬಿಕೆಗಳಿಂದ ಶೋಷಣೆಗೆ ಒಳಗಾಗುವ ಮುಸ್ಲಿಂ ಹೆಣ್ಣಿನ ಚಿತ್ರಣವನ್ನು ಕಥೆಯಲ್ಲಿ ಮುಖ್ಯವಾಗಿಸಿದ್ದಾರೆ.

ಬಾನು ಮುಷ್ತಾಕರ ಸರಿದ ಕಾರ್ಮೋಡ' ಈ ಕತೆ ತನ್ನ ಮೇಲ್ಪೆಯಲ್ಲಿ ಪರಿಚಿತ ಪ್ರೇಮಕತೆಗಳನ್ನು ಹೋಲುತ್ತಿದ್ದರೂ ಅದರ ಒಳಮೈಯಲ್ಲಿ ಬಂಡಾಯದ ವಿನ್ಯಾಸವಿದೆ. ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿರುವ ಏಳು ಜನ ಅಣ್ಣತಮ್ಮಂದಿರಲ್ಲಿ ನವಾಬನು ಕಿರಿಯ ಸದಸ್ಯ. ಇವರೆಲ್ಲರ ಕುಟುಂಬಗಳು ಬೇರೆ ಬೇರೆ ಒಲೆ ಹೂಡಿದ್ದರೂ ಅವುಗಳ ಮೇಲೆ ಹಿರಿಯಣ್ಣನ ಭದ್ರ ಹಿಡಿತವಿರುತ್ತದೆ. ನವಾಬ ಕ್ರೂರ ವ್ಯವಸ್ಥೆಯನ್ನು ಎಷ್ಟರಮಟ್ಟಿಗೆ ಒಪ್ಪಿಕೊಂಡಿರುತ್ತಾನೆಂದರೆ ಹೆಂಡತಿ ಜಬೀನಳಿಗೆ ತನ್ನ ಅಣ್ಣನ ವಿರುದ್ಧ ಮಾತಾಡಲು ಅವಕಾಶ ಕೊಡುವುದಿಲ್ಲ. ಹಿರಿಯಣ್ಣ ಜಬೀನ್‌ಳಿಗೆ ಬುದ್ಧಿ ಕಲಿಸುವುದಕ್ಕಾಗಿ ಅವಳು ಹೆರಿಗೆಗೆಂದು ತವರು ಮನೆಗೆ ಹೋದಾಗ ನವಾಬನಿಗೆ ಮತ್ತೊಂದು ಮದುವೆ ಗೊತ್ತುಮಾಡುತ್ತಾನೆ. ಆದರೆ ನವಾಬ ಅನಿರೀಕ್ಷಿತ ಬಂಡಾಯದಿಂದಾಗಿ ಅವನ ಉದ್ದೇಶ ಸಾಧಿಸುವುದಿಲ್ಲ. ತನ್ನ ಮಿತಿಗಳಲ್ಲಿಯೇ ವ್ಯವಸ್ಥೆಯನ್ನು ಪ್ರಶ್ನಿಸುವಳು ಜಬೀನ್ ಒಬ್ಬಳೇ. ನವಾಬನ ಹಿಂದಿನ ಮುಖ್ಯ ಪ್ರೇರಣೆ ಲೈಂಗಿಕತೆ. ಜಬೀನ್‌ಳ ಲೈಂಗಿಕ ಆಕರ್ಷಣೆಯಲ್ಲಿ ಸಂಪೂರ್ಣವಾಗಿ ಲೀನವಾಗುತ್ತಾನೆ. ಹಿರಿಯಣ್ಣ ಜಬೀನ್‌ಳನ್ನು ದ್ವೇಷಿಸುವುದಕ್ಕೆ ಕಾರಣ ಲೈಂಗಿಕ ಆಕರ್ಷಣೆಯೇ ಮುಖ್ಯ ಕಾರಣವಾಗುತ್ತದೆ. ಮುಸ್ಲಿಂ ಸಮಾಜದ ಹೊರಗೆ ಗಂಡು-ಹೆಣ್ಣು ಅನುಭವಿಸುವ ಸ್ವಚ್ಛಂದತೆಯನ್ನು ಪ್ರತಿದಿನ ನೋಡುವ ಅವಕಾಶಗಳು ಟ್ಯಾಕ್ಸಿ ನಡೆಸುವ ಉದ್ಯೋಗದಲ್ಲಿದ್ದ ನವಾಬನಿಗೆ ದೊರೆತ ಈ ಮಾದರಿಗಳು ಅವನನ್ನು ಆಕರ್ಷಿಸಿರುತ್ತವೆ. ಹೀಗೆ ಈ ಕತೆ ಸಂಪ್ರದಾಯಬದ್ಧ ಮುಸ್ಲಿಂ ಕುಟುಂಬ ವ್ಯವಸ್ಥೆಯ ಒಳನೋಟಗಳನ್ನು ಕೊಡುವುದಲ್ಲದೆ ಲೈಂಗಿಕತೆಯನ್ನು ಯತಾರ್ಥವಾಗಿ ಗುರುತಿಸುತ್ತದೆ.

ಸಮಾಜದ ಕೆಳಜಾತಿ, ಕೆಳವರ್ಗಗಳಲ್ಲಿ ನಡೆಯುತ್ತಿರುವ ತಾರತಮ್ಯವನ್ನು ತಿಳಿಸುವ ಒಂದು ಮಹತ್ವದ ಬೆಳವಣಿಗೆ. ಇವರ ಬರಹಗಳಿಂದಾಗಿ ವಿಭಿನ್ನ ಲೋಕದ ಮಹಿಳಾ ಸಂವೇದನೆಗಳು ಕೂಡಿಕೊಂಡು ಲೇಖಕಿಯರ ಸಾಹಿತ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿತು. ಲೇಖಕಿಯರು ತಮ್ಮ ಜೀವನದಲ್ಲಿ ಅನುಭವಿಸಿದಂತಹ ಕೆಲವು ಅವಮಾನದ, ಕೆಲವು ಘಟನೆಗಳನ್ನು ನಿರೂಪಿಸಿದ್ದಾರೆ.

ದಲಿತರ ಬದುಕನ್ನು ಚಿತ್ರಿಸುವ ಬಹುತೇಕ ಲೇಖಕ, ಲೇಖಕಿಯರಲ್ಲಿ ಅವರ ಬದುಕಿನ ಶೋಷಣೆಯ ಅಂಶವನ್ನು ಪ್ರತ್ಯೇಕಿಸಿ ಅದಕ್ಕೆ ಕಾರಣವಾದ ವ್ಯವಸ್ಥೆಯ ಮೇಲೆ ಆಕ್ರೋಶವನ್ನು ಸೂಚಿಸುವ ದನಿಯಲ್ಲಿ ಇಲ್ಲವೇ ಇಂತಹ ಬದುಕನ್ನು ಕುರಿತು ಅನುಕಂಪದ ದಾಟಿಯಲ್ಲಿ ಬರೆಯುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇಡೀ ಜನಾಂಗದ ಅನಕ್ಷರತೆ, ಅಜ್ಞಾನ, ಮುಗ್ಧತೆ, ಅಸಹಾಯಕತೆಗಳನ್ನು ಮೇಲುಜಾತಿ ವರ್ಗಗಳವರು ಹೇಗೆ ಶೋಷಿಸುತ್ತಾರೆ ಎಂಬುದನ್ನು ಕಥೆಯ ಮೂಲಕ ಧ್ವನಿಸುವ ಸಾಮರ್ಥ್ಯವನ್ನು ಲೇಖಕಿಯರ ಸಾಹಿತ್ಯದಲ್ಲಿ ಕಾಣಬಹುದು.

ಬಂಡಾಯ ಸಾಹಿತ್ಯ ಎಂಬುದಕ್ಕೆ ಒಂದು ಹೊಸ ಅರ್ಥವನ್ನೇ ಕೊಟ್ಟವರು ಮುಸ್ಲಿಂ ಲೇಖಕಿಯರು ಮುಸ್ಲಿಂ ಲೇಖಕಿಯರು ಬರೆಯತೊಡಗಿದ್ದು ಮಹಿಳಾ ಸಾಹಿತ್ಯಕ್ಕೆ ಮಾತ್ರವಲ್ಲ ಕನ್ನಡ

ಸಾಹಿತ್ಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ. ಒಂದರ್ಥದಲ್ಲಿ ನಿಜವಾದ ಬಂಡಾಯ ಸಾಹಿತ್ಯ ಎಂದರೆ ಮುಸ್ಲಿಂ ಮಹಿಳೆಯರು ಬರೆದ ಸಾಹಿತ್ಯ ಎಂದೇ ಹೇಳಬಹುದು. ಯಾಕೆಂದರೆ ಇತರೆ ಬಂಡಾಯ ಸಾಹಿತಿಗಳಲ್ಲಿ ಬಂಡಾಯವಿರುವುದು ಬರವಣಿಗೆಯಲ್ಲಿ ಮಾತ್ರ. ಇಲ್ಲಿ ಅವರು ಏನೇ ಬರೆದರೂ ನಿರ್ಭಯವಾಗಿ ಬರೆಯಬಹುದು. ವೈಯಕ್ತಿಕವಾದ ಯಾವುದೇ ಒತ್ತಡ, ಅಪಾಯಗಳಿಗೆ ಅವರು ತುತ್ತಾಗುವುದಿಲ್ಲ. ಆದರೆ ಮುಸ್ಲಿಂ ಸಾಹಿತಿಗಳು, ಅದರಲ್ಲೂ ಲೇಖಕಿಯರ ವಿಷಯ ಇದಕ್ಕೆ ತೀರಾ ಭಿನ್ನವಾಗಿದೆ. ಅವರ ಬರವಣಿಗೆಯೇ ಒಂದು ಬಂಡಾಯವಾಗಿದೆ.

ಹೊಸ ತಲೆಮಾರಿನ ಲೇಖಕಿಯರು ಯಾವುದೇ ರೀತಿಯ ಚಳುವಳಿಯ ಪ್ರಭಾವಕ್ಕೆ ಒಳಗಾದೆ ತಮ್ಮದೇ ಆದ ಸಾಹಿತ್ಯ ನೆಲೆಯಲ್ಲಿ ಮಹಿಳೆಯ ಸಮಸ್ಯೆಗಳನ್ನು ಚಿಂತಿಸುತ್ತಾ ಮಹಿಳೆಯನ್ನು ಕುರಿತು ಹೊಸ ಬಗೆಯ ಆಲೋಚನೆಗಳನ್ನು ಅವರ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಈ ಲೇಖಕಿಯರು ತಮ್ಮದೇ ಆದ ಅಭಿವ್ಯಕ್ತಿಯಲ್ಲಿ ಇಂದಿನ ಉದ್ಯೋಗಸ್ಥ ಮಹಿಳೆಯರ ಸಮಸ್ಯೆಗಳು ಸಾಮಾಜಿಕ ಸಮಸ್ಯೆಗಳ ಬಗ್ಗೆ ಚಿಂತಿಸಿ ಮಹಿಳೆಯರಿಗೆ ಜಾಗೃತ ಮೂಡಿಸುವಲ್ಲಿ ಪ್ರಯತ್ನಿಸಲಾಗಿದೆ. ಈ ಲೇಖಕಿಯರಲ್ಲಿ ಡಾ. ನಾಗವೇಣಿ ಎಚ್., ಬಿ.ಟಿ. ಜಾಹ್ನವಿ, ಕಮಲ ಹಮ್ಮಿಗೆ, ತುಳಸಿ ವೇಣುಗೋಪಾಲ, ಎಚ್. ಗಿರಿಜಮ್ಮ, ವಿನಯಾ, ಸುಮಂಗಲಾ, ಶಾಂತಕುಮಾರಿ ಮುಂತಾದವರು ಭಿನ್ನ ಸಮುದಾಯದ ಭಿನ್ನ ವೃತ್ತಿ, ಭಿನ್ನ ಸಾಂಸ್ಕೃತಿಕ ನೆಲೆಯಿಂದ ಸಾಹಿತ್ಯ ಲೋಕವನ್ನು ಪ್ರವೇಶಿಸಿದರು. ಮಹಿಳೆಯರ ಬದುಕು, ಭವಿಷ್ಯ, ಸಮಕಾಲೀನ ಸಂದರ್ಭದೊಂದಿಗೆ ಚಿತ್ರಿಸುವ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಹೊಸ ಸೇರ್ಪಡೆಯಾಗಿದೆ.

ಗಂಡು-ಹೆಣ್ಣಿನ ಸಂಬಂಧಗಳು ಎಲ್ಲ ತಲೆಮಾರುಗಳ ಲೇಖಕಿಯರ ಕತೆಗಳಿಗೆ ವಸ್ತು ಒದಗಿಸಿವೆ. ದಿನ ಕಳೆದಂತೆ ಈ ಸಂಬಂಧಗಳು ಜಟಿಲವಾಗಿತ್ತಿವೆಯೇ ಹೊರತು ಸರಳಗೊಂಡಿಲ್ಲ ಎನ್ನುವುದಕ್ಕೆ ಸದ್ಯದ ಪೀಳಿಗೆಯವರ ಕತೆಗಳು ಉದಾಹರಣೆಗಳಾಗಿವೆ. ಈ ಜಟಿಲತೆಗೆ ಮುಖ್ಯ ಕಾರಣ ಸಮಾಜದಲ್ಲಿ ಸ್ತ್ರೀಯ ಬದಲಾಗುತ್ತಿರುವ ಸ್ಥಾನಮಾನಗಳು ಹಾಗೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಇದರ ಪರಿಣಾಮವಾಗಿ ಕಾಣಿಸಿಕೊಂಡ ದ್ವಂದ್ವ ಸಂಬಂಧಗಳು ಶತಮಾನಗಳಿಂದಲೂ ತನ್ನ ಭದ್ರತೆಯನ್ನು ಕಾಯ್ದುಕೊಂಡಿದ್ದ ವಿವಾಹಸಂಸ್ಥೆ ಇಂದು ಬಲವಾದ ಆಘಾತಕ್ಕೆ ಒಳಗಾಗಿದೆ. ಈ ಪರಿಸ್ಥಿತಿಗೆ ಪಾಶ್ಚಾತ್ಯ ಪ್ರಭಾವಗಳು ಹಾಗೂ ಸ್ತ್ರೀ ಚಳುವಳಿಗಳು ಬಹುಮಟ್ಟಿಗೆ ಕಾರಣವಾಗಿವೆ.

ಭಾರತೀಯ ಹಿಂದೂ ಸಮಾಜದಲ್ಲಿ ಸ್ತ್ರೀಗೆ ಅನೇಕ ಸಲ, ಅನೇಕ ರೂಪದ ಶೋಷಣೆಗಳಾಗಿವೆ. ಆದರೆ ಅನೇಕ ಮಹಿಳೆಯರು ತಮಗೆ ಗೊತ್ತಿದ್ದೋ, ಗೊತ್ತಿಲ್ಲದೆಯೋ ತಮ್ಮ ಶೋಷಣೆಗಳಿಗೆ ಎಷ್ಟೋ ಸಲ ತಾವೇ ಕಾರಣರಾಗಿರುತ್ತಾರೆ. ಸ್ತ್ರೀಗೆ ಸಮಾನತೆ ಬೇಕು ಅಂದರೆ ಪುರುಷನ ಆಧಿಪತ್ಯದ ನಿರಾಕರಣೆ ಎಂದು ಅರ್ಥವಲ್ಲ. ಇಬ್ಬರ ಜೀವನದಲ್ಲೂ ಪರಸ್ಪರ ಪ್ರೇಮ, ಸಮಾನತೆ ಇರಬೇಕು.

ಆದರೆ ಆಧುನಿಕ ಸಮಾಜದಲ್ಲಿ ಈ ಸಂಗತಿಗಳು ತುಂಬಾ ಸಂಕೀರ್ಣವಾಗಿವೆ. ಅನೇಕ ಆಂತಕ, ಅನುಮಾನ, ಗೊಂದಲಗಳಿಗೆ ಕಾರಣವಾಗಿವೆ. ಈ ಜಟಿಲತೆಗೆ ಮುಖ್ಯ ಕಾರಣ ಸಮಾಜದಲ್ಲಿ ಸ್ತ್ರೀಯ ಬಗ್ಗೆ ಇದ್ದ ಕಲ್ಪನೆಗಳು ಇಂದು ಬದಲಾಗುತ್ತಿರುವುದು ಯಾವುದೇ ಸಾಂಸ್ಥಿಕ ನಂಬಿಕೆ, ಆಚರಣೆ, ಸ್ವರೂಪಗಳು ಕಾಲದ ಒತ್ತಡಕ್ಕೊಳಗಾಗಿ ಬದಲಾವಣೆಯಾಗುವ ಸಂದರ್ಭದಲ್ಲಿ ಅನೇಕ ದ್ವಂದ್ವಗಳು ಉಂಟಾಗುವುದು ಸಹಜ. ಮಹಿಳಾ ಕಥೆಗಾರ್ತಿಯರು ಇಂತಹ ಸಂವೇದನೆಯನ್ನು ತಮ್ಮ ಕಥೆಗಳ ಮೂಲಕ ತಿಳಿಸಿದ್ದಾರೆ. ಶತಮಾನಗಳಿಂದ ಸ್ತ್ರೀ ಬಗ್ಗೆ ಇದ್ದ ಗ್ರಹಿಕೆಯು ಇಂದು ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಹಾಗೂ ಸ್ತ್ರೀ ಚಳುವಳಿಗಳ ಪರಿಣಾಮದಿಂದ ಇತ್ತೀಚೆಗೆ ಬದಲಾವಣೆಯಾಗುತ್ತದೆ. ವೈವಾಹಿಕ ವಿರಸಗಳು ಗಂಡ-ಹೆಂಡತಿಯರ ಜಗಳ, ಬಡತನ ಮತ್ತು ಶ್ರೀಮಂತಿಕೆಯ ಕಾರಣದಿಂದಾಗಿ ಬಾಳಿನಲ್ಲಿ ಉಂಟಾಗುವ ಬಿರುಕು, ತಾಯ್ತನದ ಸಮಸ್ಯೆ ಇವೆಲ್ಲಾ ಮಹಿಳಾ ಲೇಖಕಿಯರನ್ನು ಗಾಢವಾಗಿ ಕಾಡಿವೆ.

ತಲೆಮಾರಿನ ಲೇಖಕಿಯರು ತಮ್ಮ ಅನುಭವ ಹಾಗೂ ಅದರ ವೈವಿಧ್ಯಗಳ ಬಗೆಗೆ ಇರುವ ಕುತೂಹಲ ಆಸಕ್ತಿಗಳು, ಅನುಭವಗಳನ್ನು ಕತೆಯಾಗಿ ಮಾರ್ಪಡಿಸುವಲ್ಲಿ ಅಗತ್ಯವಿರುವ ಶೈಲಿ, ವಸ್ತು, ಅಭಿವ್ಯಕ್ತಿ, ತಂತ್ರ ಮೊದಲಾದ ಎಲ್ಲಾ ದೃಷ್ಟಿಗಳಿಂದ ಉತ್ತಮ ರೀತಿಯ ಸಾಹಿತ್ಯವನ್ನು ಗಮನಿಸಬಹುದು.

ಡಾ. ಎಚ್. ನಾಗವೇಣಿಯವರ ಕರಾವಳಿ ಪ್ರಾದೇಶಿಕ ಹಿನ್ನೆಲೆಯಲ್ಲಿ ಬರೆಯುವ ಕಥೆಗಾರ್ತಿಯರಲ್ಲಿ ಇವರು ಪ್ರಮುಖರು. 'ಗಾಳ', 'ನಾಕನೇ ನೀರು', 'ಮೀಯುವ ಆಟ' ಎಂಬ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಅವರ ಕಥೆಗಳಲ್ಲಿ ತುಳುನಾಡಿನ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಅವರ 'ನಾಕನೇ ನೀರು' ಕಥೆಯು ತುಳುನಾಡಿನ ಹೆಣ್ಣಿನ ಮಡಿ-ಮೈಲಿಗೆ, ಸಂಪ್ರದಾಯಗಳನ್ನು ಕುರಿತು ಹೇಳುತ್ತದೆ. ಅವರ ಮತ್ತೊಂದು ಕಥಾ ಸಂಕಲನ 'ಮೀಯುವ ಆಟ' ಪ್ರಾದೇಶಿಕತೆ ಹಾಗೂ ನಂಬಿಕೆಗಳಿಂದ ವಿಶಿಷ್ಟವಾಗಿದೆ.

ಕಥೆಯ ನಾಯಕ ಮೂಡೂರನ ಹೆಂಡತಿ ಆತನ ಸ್ವಂತ ತಮ್ಮನಿಂದಲೇ ಬಸಿರಾದಳು. ನಿಜಸ್ಥಿತಿ ಮೂಡುರಿಗೆ ಗೊತ್ತಿದ್ದರೂ ಪ್ರಶ್ನಿಸುವ ಮನೋಧರ್ಮವಿರಲಿಲ್ಲ. ಇಲ್ಲಿನ ಆತನ ಮಾನವೀಯತೆಯನ್ನು, ಗುಣವನ್ನು ಹಾಗೂ ಶ್ರಮಜೀವಿಗಳ ಬದುಕನ್ನು ಕುರಿತು ಹೇಳಿದ್ದಾರೆ. ಇಲ್ಲಿಯ ಪಾತ್ರಗಳು ಆತ್ಮಾಭಿಮಾನವನ್ನು ಕಾಪಾಡಿಕೊಳ್ಳಲು ತೀವ್ರವಾದ ಪ್ರತಿಭಟನೆಯು ವ್ಯಕ್ತಪಡಿಸುತ್ತಾರೆ. 'ದಾನ', 'ಬೆಳ್ಳಿಲೋಟ' ಕಥೆಯು ಇದಕ್ಕೆ ನಿದರ್ಶನವಾಗಿದೆ. ನಾಗವೇಣಿಯವರ ಬಹುಪಾಲು ಕಥೆಗಳಲ್ಲಿ ತುಳುನಾಡಿನ ಕೆಳವರ್ಗದ ಜನರ ರೀತಿ-ನೀತಿಗಳು, ಅನಕ್ಷರತೆ, ಮೂಢನಂಬಿಕೆಗಳು, ಮಡಿ, ಮೈಲಿಗೆ, ಸಂಪ್ರದಾಯಗಳನ್ನು ಗುರುತಿಸಲಾಗಿದೆ.

ತಾಯ್ತನದ ಸಮಸ್ಯೆ, ಸ್ತ್ರೀ ಪ್ರಜ್ಞೆಯನ್ನು ಆಳವಾಗಿ ಪ್ರಭಾವಿಸಿರುವ ಸಮಸ್ಯೆಗಳಲ್ಲೊಂದು. ಈ ಸಮಸ್ಯೆಗೆ ಹಲವಾರು ಆಯಾಮಗಳಿರುವುದರಿಂದ ಅದಕ್ಕೆ ಸುಲಭ ಪರಿಹಾರಗಳಿಲ್ಲ. ಈ ಸಮಸ್ಯೆಯನ್ನು ಅದರ ಎಲ್ಲಾ ಸಂಕೀರ್ಣತೆಗಳೊಂದಿಗೆ ಎದುರಿಸುವ ನೇಮಿಚಂದ್ರರ 'ಹೊಸಹುಟ್ಟು' ಮಹತ್ವದ ಕಥೆಯಾಗುತ್ತದೆ. ಈ ಕತೆಯ ನಾಯಕಿ ಶಶಿ ಚಿತ್ರಕಲೆಯಲ್ಲಿ ಸೃಜನಶೀಲತೆಯನ್ನು ಕೊಂಡುಕೊಂಡ ಕಲಾವಿದೆ. ಗಂಡ ರಮೇಶ ಈ ಸೃಜನಶೀಲತೆಯನ್ನು ಗೌರವಿಸುತ್ತಾನೆ ಹಾಗೂ ಯಾವಾಗಲೂ ಅವಳಲ್ಲಿ ಜಾಗೃತವಾಗಿರುವಂತೆ ಎಚ್ಚರವಹಿಸುತ್ತಾನೆ. ಮದುವೆಯಾಗಿ ನಾಲ್ಕಾರು ವರ್ಷಗಳಾದರೂ ಇವರಿಗೆ ಮಕ್ಕಳಾಗಿರುವುದಿಲ್ಲ, ಆದರೆ ಇದರ ಬಗ್ಗೆ ಅವರು ಚಿಂತಿತರಾಗುವುದಿಲ್ಲ. 'ಈ ಹೆಣ್ಣುಗಳೇಕೆ ತಾಯ್ತನಕ್ಕೆ ಆತುರಗೊಳ್ಳುತ್ತಾರೆ?" ಎನ್ನುವ ಪ್ರಶ್ನೆ ಶಶಿಗೆ ಅರ್ತವೇ ಆಗಿರುವುದಿಲ್ಲ.

ನೆರೆಹೊರೆಯವರ ಹಾಗೂ ಬಳಗದವರ ನಿಲುವು, ಪ್ರತಿಕ್ರಿಯೆಗಳಿಂದಾಗಿ ತಾಯ್ತನದ ಪ್ರಶ್ನೆಗೆ ಕೌಟುಂಬಿಕ ಹಾಗೂ ಸಾಮಾಜಿಕ ಪ್ರಶ್ನೆಗಳೂ ಇವೆ ಎಂದು ಶಶಿಗೆ ಅರಿವಾದಾಗ ಅವಳು ಮಾನಸಿಕ ಒತ್ತಡಕ್ಕೆ ಒಳಗಾಗುತ್ತಾಳೆ. ತಾಯಿಯಾಗುವ ಛಲದಿಂದ ಎಲ್ಲಾ ತರಹದ ವೈದ್ಯಕೀಯ ಉಪಾಯಗಳನ್ನು ಅವಳು ಹುಡುಕಿಕೊಂಡು ಹೋಗುತ್ತಾಳೆ. ಆದರೆ ಪ್ರಯೋಜನವಾಗುವುದಿಲ್ಲ. ಈ ಸಂದಿಗ್ಧಗಳಲ್ಲಿ ಅವಳಿಗೆ ಸ್ಥೈರ್ಯ ತಂದುಕೊಡುವುದು ರಮೇಶನ ದಿಟ್ಟ ನಿಲುವು. ತನ್ನನ್ನು ಕಾಡುವ ಸಮಸ್ಯೆಯಿಂದ ಪಾರಾಗಿ ಶಶಿ ಹೊಸಹುಟ್ಟು ಪಡೆಯುವುಂತಾಗುವದು. ಮತ್ತೊಬ್ಬ ಹೆಣ್ಣಿನ ಕಲಾವಿದೆಯ ಮೂಲಕ ಎನ್ನುವುದು ಅರ್ಥಪೂರ್ಣವಾಗಿದೆ. ಗಂಡು-ಹೆಣ್ಣಿನ ಸಂದರ್ಭದಲ್ಲಿ ಸಾಮಾನ್ಯವಾಗಿ ತಲೆದೂರುವ ಸಂಘರ್ಷ ಇಲ್ಲಿಲ್ಲ. ಮೌಲ್ಯವೆಂದು ಸೃಜನಶೀಲತೆ ಪಡೆಯುವ ಆದ್ಯತೆ ಇಪ್ಪತ್ತೊಂದನೆಯ ಶತಮಾನದಲ್ಲಿ ಬೆಳೆಯಬಹುದಾದ ಗಂಡು-ಹೆಣ್ಣಿನ ಸಂಬಂಧದ ಒಂದು ಮಾದರಿ ಇಲ್ಲಿದೆ.

ಲೇಖಕಿಯರ ಬಹುಪಾಲ ಕಥೆಗಳು ಗಂಡು-ಹೆಣ್ಣಿನ ಸಂಬಂಧ, ಕೌಟುಂಬಿಕ ಸಮಸ್ಯೆಗಳು, ಹೆಣ್ಣಿನ ಮನಸ್ಸಿನ ಕೋಮಲ ಭಾವನೆಗಳ ಹೊಯ್ದಾಟ ಇವುಗಳನ್ನು ಕುರಿತು ಇರುತ್ತವೆ. ಆದರ್ಶ ಪ್ರಿಯತೆ, ಸಂಪ್ರದಾಯ ಶರಣತೆ, ಅತಿಭಾವುಕತೆಯ ಅಂಶಗಳಿರುತ್ತವೆ. ಕಥೆಯ ಪಾತ್ರಗಳು ಕ್ಲಿಷ್ಟತೆಯಾಗಲೀ, ಸಂಕೀರ್ಣತೆಯಾಗಲೀ ಇರುವುದಿಲ್ಲ. ವಸ್ತುವಿನ ಆಯ್ಕೆಯು ನಿರೂಪಣೆಯ ಕ್ರಮದಲ್ಲಿ ವಿಭಿನ್ನವಾಗಿರುವುದನ್ನು ನೋಡಬಹುದು.

ಎಂ.ಎಸ್. ವೇದಾ ಅವರ ಕಥೆಗಳಲ್ಲಿ ಮೈಸೂರು ಸುತ್ತಲಿನ ಗ್ರಾಮೀಣ ಭಾಷೆಯನ್ನು ಪ್ರಮುಖವಾಗಿಸಿದ್ದಾರೆ. ಇವರ 'ಕುಯ್ಯನೆಂಬ ಬಾಲಕನ ಕತ್ತಾಲ ಲೋಕವೋ' ಈ ಕಥೆ ಜಾತಿಪದ್ಧತಿಯ ಅಮಾನಷ ಕ್ರೌರ್ಯವನ್ನು ಕಾಣಬಹುದು. ಹಾಗೂ 'ಪಾಲು' ಕಥೆಯಲ್ಲಿ ಹೆಣ್ಣಿನ ಸ್ವಾಭಿಮಾನವನ್ನು ಎತ್ತಿಹಿಡಿಯುವ ಕಥೆಯಾಗಿದೆ. ಹೀಗೆ ಅವರ ಕಥೆಗಳಲ್ಲಿ ಗ್ರಾಮೀಣ ಬದುಕಿನ ಚಿತ್ರಣ, ಜಾತಿಪದ್ಧತಿ, ಪರಿವಾರದ ಹುಡುಗನ ಕುರಿತ ಅನುಕಂಪ ಮುಖ್ಯವಾಗಿ ಕಾಣಲಾಗಿದೆ.

ಕಮಲಾ ಹೆಮ್ಮಿಗೆಯವರ 'ನಾನು ಅವನು ಮತ್ತು ಅವಳು' ಈ ಕತೆಯಲ್ಲಿ ವೈವಾಹಿಕ ವಿರಸವನ್ನು ಹೊಂದಿದೆ. ಈ ವಿರಸದ ಕತೆಯ ಹಿನ್ನೆಲೆಯಲ್ಲಿ 'ಪ್ರೇಮ'ದ ಕತೆಗಳೂ ಇವೆ. ಈ ಕತೆಯ 'ನಾನು' ಮತ್ತು ಅವನು ಇವರ ನಡುವೆ 'ಅವಳು' ಇದ್ದಾಳೆ. ಅವಳು ತಾನು ಪ್ರೀತಿಸಿದ ಮೈಬೇಲ್‌ನಿಗಾಗಿ ಶ್ರೀಮಂತ ಪತಿಯನ್ನು, ಬೆಳೆದ ಮಕ್ಕಳನ್ನು ತೊರೆದು ಬಂದವಳು. ಮೈಬೇಲ್‌ನಿಗೆ ತನ್ನ ಊರಿನಲ್ಲಿ ಹೆಂಡತಿ, ಮಕ್ಕಳಿರುವುದೂ ಅವಳ ಪ್ರೇಮಕ್ಕೆ ಅಡ್ಡ ಬರುವುದಿಲ್ಲ. ಅವಳು ಆರ್ಥಿಕವಾಗಿ ಸ್ವತಂತ್ರಳಾಗಿರುವುದರಿಂದ ಪರಿಸ್ಥಿತಿಯನ್ನು ನಿಭಾಯಿಸಿಕೊಳ್ಳಬಲ್ಲಳು. ಈ ಕತೆಯಲ್ಲಿ ಗಂಡು-ಹೆಣ್ಣಿನ ಸಂಬಂಧಗಳಲ್ಲಾದ ಪರಿವರ್ತನೆಯನ್ನು ತಿಳಿಸುತ್ತದೆ. ಈ ಸಂಬಂಧಗಳು ಬದಲಾದ ಸಾಮಾಜಿಕ ಸಂದರ್ಭದಲ್ಲಿ ಪರಿವರ್ತಿತವಾಗಿದ್ದು ಗಂಡು-ಹೆಣ್ಣಿನ ಸಂಬಂಧದ ನೈಜತೆಯನ್ನು ತಿಳಿಸುತ್ತದೆ.

ಎಚ್. ಗಿರಿಜಮ್ಮನವರ 'ಕೇವಲ ಮನುಷ್ಯ' ಈ ಕಥೆಯ ನಾಯಕನೂ ಒಬ್ಬ ಪ್ರಸಿದ್ಧಿಯಾಗಿರುತ್ತಾನೆ. ಅವನು ಕೃತಿಗಳ ಓದಿನಿಂದಾಗಿ ಅವನಲ್ಲಿ ಆತ್ಮವಿಶ್ವಾಸಗಳಿದ್ದು, ತಾನೂ ಒಬ್ಬ ಸಾಹಿತಿಯಾಗಬೇಕೆಂಬ ಆಸೆಯುಳ್ಳ ತರುಣಿಯೊಬ್ಬಳ ಜೊತೆಗೆ ನಡೆಯುವ ಮುಖಾಮುಖಿ ಈ ಕತೆಯಲ್ಲಿ ನಡೆಯುವ ಕ್ರಿಯೆಯಾಗಿದೆ. ವಯಸ್ಸಾದ ಈ ಸಾಹಿತಿಯಲ್ಲಿ ಅಖಂಡ ಆತ್ಮವಿಶ್ವಾಸವಿರುತ್ತದೆ. ಕಲೆ, ಸಾಹಿತ್ಯಗಳ ಬಗ್ಗೆ ಅಧಿಕಾರ ವಾಣಿಯಿಂದ ಅವನು ಮಾತಾಡಬಲ್ಲ ಭಯ, ಆತಂಕಗಳೊಡನೆ ಅವನಲ್ಲಿ ಬಂದ ತರುಣಿಯಲ್ಲಿ ಧೈರ್ಯ ತುಂಬುತ್ತಾನೆ. ಸರಿಯಾದ ಮಾರ್ಗದರ್ಶನ ಮಾಡುತ್ತಾನೆ. ಆದರೆ ಅವನು ಅನಿರೀಕ್ಷಿತವಾಗಿ ಅವನು ಅವಳ ಭುಜದ ಮೇಲೆ ಕೈಯಿಟ್ಟಾಗ ತರುಣಿಗೆ ಆಘಾತವಾಗುತ್ತದೆ. ನಂತರ ಅವನ ನಡತೆಯ ವಿವರಣೆಯನ್ನು ಕೇಳಿ ಬರೆದ ಅವಳ ಪತ್ರಕ್ಕೆ ಬಂದ ಉತ್ತರ ಇನ್ನೂ ಹೆಚ್ಚು ಆಘಾತಕರವಾಗಿರುತ್ತದೆ. ಈ ಕತೆ ಗಂಡು-ಹೆಣ್ಣಿನ ಸಂಬಂಧಗಳು ಕೊನೆಗೆ ಕಾಮದಲ್ಲಿ ನಿಂತಿವೆಯೇ? ಹೆಣ್ಣನ್ನು ಗೆಳತಿಯಾಗಿ, ಸಾಹಿತಿಯಾಗಿ, ಸಹೋದ್ಯೋಗಿಯಾಗಿ ಮಾತ್ರ ಕಾಣುವುದು ಅವಶ್ಯವೇ? ಎನ್ನುವ ಹಲವಾರು ರೀತಿಯ ಪ್ರಶ್ನೆಗಳನ್ನು ಕತೆಯಲ್ಲಿ ನೋಡಬಹುದು.

ಎಪ್ಪತ್ತರ ದಶಕದ ಲೇಖಕಿಯರು ಅನೇಕ ಆಧುನಿಕ ಸಮಸ್ಯೆಗಳತ್ತ ಗಮನ ಹರಿಸಿದ್ದಾರೆ. ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಮನೋಭಾವದ ಮಹಿಳೆಯನ್ನು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಅನೇಕರು ನೈಜವಾದ ಪ್ರಾದೇಶಿಕ ಭಾಷೆ ಬಳಸುವಲ್ಲಿ ದಲಿತ ಹಾಗೂ ಶೋಷಿತ ವರ್ಗದ ಜೀವನ ಚಿತ್ರಿಸುವಲ್ಲಿ ತಮ್ಮ ಪ್ರತಿಭೆಯನ್ನು ತೋರಿದ್ದಾರೆ. ಇತ್ತೀಚಿನ ಅನೇಕ ಕಥೆಗಳಲ್ಲಿ ಹೆಣ್ಣುತನವನ್ನು ಅಳೆಯುವ ಹಾಗೂ ಅರಿಯುವ ಪ್ರಾಮಾಣಿಕ ಪ್ರಯತ್ನ ಕಂಡುಬರುತ್ತದೆ.

ಈ ದಶಕದಲ್ಲಿ ನಡೆದ ಜನಪರ ಹೋರಾಟಗಳು, ದೇಶದ ರಾಜಕೀಯ, ಸಾಮಾಜಿಕ ಬದುಕಿನಲ್ಲಿ ಮಾತ್ರವೇ ಅಲ್ಲದೆ ಸಾಹಿತ್ಯ ಕ್ಷೇತ್ರದಲ್ಲಿಯೂ ಮಹತ್ತರ ಬದಲಾವಣೆಗಳನ್ನು ಉಂಟುಮಾಡಿದ

ಪರಿಣಾಮವಾಗಿ ದಲಿತ, ಬಂಡಾಯ ಸಾಹಿತ್ಯಗಳ ಪರಂಪರೆ ಆರಂಭವಾಯಿತು. ಶೋಷಿತ ಕೆಳವರ್ಗ, ಕೆಳಜಾತಿ ವರ್ಗದವರ ಬದುಕು, ಬದಲಾವಣೆಗಳನ್ನು ಚಿತ್ರಿಸುತ್ತಲೇ ಅವರ ಸ್ಥಿತಿಯಲ್ಲಿ ಬದಲಾವಣೆ ಉಂಟುಮಾಡಬೇಕೆಂಬ ಆಶಯವನ್ನು ಈ ಸಾಹಿತ್ಯ ಪ್ರತಿಪಾದಿಸಿತು.

ಸಮಕಾಲೀನ ಕಥಾಸಾಹಿತ್ಯ ಸಾಕಷ್ಟು ಸಾಧನೆಗಳನ್ನು ಮಾಡಿದೆ. ಸಿದ್ಧತಂತ್ರಗಳು, ಸಿದ್ಧಮಾದರಿಗಳು, ಪೂರ್ವನಿಶ್ಚಿತ ಅಭಿಪ್ರಾಯಗಳನ್ನು ಬಿಟ್ಟು ಹೊಸದಾರಿ ಕಂಡುಕೊಳ್ಳುತ್ತ ಬಹುತೇಕ ಲೇಖಕಿಯರು ಪ್ರಯತ್ನ ನಡೆಸಿದ್ದಾರೆ.

ವಿಭಿನ್ನ ಕೋಮು, ಜಾತಿ, ವರ್ಗಗಳ ಹಿನ್ನೆಲೆಯಿಂದ ಬಂದ ಲೇಖಕಿಯರು ಸ್ತ್ರೀಯನ್ನು ಕೇಂದ್ರವಾಗಿಟ್ಟುಕೊಂಡು ತಮ್ಮ ಪರಿಸರದ ಬದುಕನ್ನು ಗಾಢವಾಗಿ ಸೆರೆಹಿಡಿಯುವ ಮೂಲಕ ಪುರುಷ ಸಾಹಿತ್ಯಕ್ಕಿಂತ ಭಿನ್ನವಾದ ಕೊಡುಗೆಯನ್ನು ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ. ಕನ್ನಡ ಸಾಹಿತ್ಯದ ವೈವಿಧ್ಯವನ್ನು ಹೆಚ್ಚಿಸಿದ್ದಾರೆ. ಲೇಖಕಿಯರ ಕಥನಸಾಹಿತ್ಯ ಪ್ರಾದೇಶಿಕ ತತ್ವವನ್ನು ಮೈಗೂಡಿಸಿಕೊಳ್ಳುವ ರೀತಿ ಅನನ್ಯ. ಇದೂ ಸಹ ಮಹಿಳಾ ಸಾಹಿತ್ಯಕ್ಕೆ ಹೊಸ ಆಯಾಮ ತಂದಿದೆ.

ನಿರ್ದಿಷ್ಟ ವಸ್ತುವಿಗೆ ಅಂಟಿಕೊಳ್ಳದೆ ಬದುಕಿನ ಹಾಗೂ ಮನುಷ್ಯನ ಕುತೂಹಲಕಾರಿ ಸಂಗತಿಗಳನ್ನು ಪ್ರಬುದ್ಧವಾಗಿ ಚಿತ್ರಿಸುವ ಜಯಶ್ರೀ ದೇಶಪಾಂಡೆ, ಶಾಂತಾ ನಾಗರಾಜ್, ಕಮಲಾ ಹೆಮ್ಮಿಗೆ, ವಸುಮತಿ ಉಡುಪ, ಭಾಗೀರತಿ ಹೆಗಡೆ, ಕೆ.ಎಂ. ವಿಜಯಲಕ್ಷ್ಮಿ ಮೊದಲಾದವರ ಕಥೆ, ಕಾದಂಬರಿಗಳು ಮಹಿಳಾ ಸಾಹಿತ್ಯವನ್ನು ಏಕಪಕ್ಷೀಯ ನಿಲುವಿಗೆ ಸಿಲುಕುವ ಅಪಾಯದಿಂದ ಪಾರುಮಾಡಿವೆ. ಪಾತ್ರಗಳ ಅಂತ ರಂಗವನ್ನು ಅರಿಯುವ ಸೂಕ್ಷ್ಮ ಒಳನೋಟ, ಸಂವೇದನಶೀಲವಾದ ಭಾಷೆ ವಿಭಿನ್ನ ಕಥಾವಸ್ತುವುನಿಂದ ಅವರ ಕಥೆಗಳು ರಚನೆಯಾಗಿವೆ.

ಬದಲಾದ ಅಥವಾ ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ವ್ಯತ್ಯಾಸವಾದ ಸ್ತ್ರೀ ಸ್ಥಾನಮಾನಗಳು ಮತ್ತು ಪುರುಷ ಪ್ರಧಾನವಾದ ವ್ಯವಸ್ಥೆಯಲ್ಲಿ ಈ ಕಾರಣದಿಂದ ವ್ಯಕ್ತವಾದ ದ್ವಂದ್ವ ಸಮಸ್ಯೆಗಳು ಅನೇಕ ಸಂಕೀರ್ಣ ಸಮಸ್ಯೆಗಳಲ್ಲಿ ಸೃಷ್ಟಿಸಿವೆ. ಇಂತಹ ಅವಸ್ಥೆಗೆ ಮಹಿಳಾ ಚಳುವಳಿಗಳು ಬಹುಮಟ್ಟಿಗೆ ಕಾರಣವೆನ್ನಬಹುದು. ಇಂತಹ ಸಮಸ್ಯೆಗಳನ್ನು ಮಾಲತಿ ಪಟ್ಟಣಶೆಟ್ಟಿಯವರ ಕಥೆಗಳಲ್ಲಿ ನೋಡಬಹುದು. ಕಮಲಾ ಹೆಮ್ಮಿಗೆ ಅವರ ಕಥೆಗಳು ವೈವಾಹಿಕ ವಿರಸವನ್ನೇ ಚಿತ್ರಿಸಿದರೂ ಸ್ತ್ರೀಯ ಮತ್ತು ಪುರುಷರ ನಡುವಿನ ಪ್ರೀತಿ, ಪ್ರೇಮ ನಗೆಯನ್ನು ಸಮರ್ಥವಾಗಿ ಹಿಡಿಯುತ್ತವೆ. ಇವರ ಕಥೆಗಳೂ ಸಹ ಬದುಕಿನ ಬಗ್ಗೆ ಭವಿಷ್ಯದ ಪರಿವರ್ತನೆಯನ್ನು ಪ್ರತಿಪಾದಿಸುತ್ತದೆ.

ಒಬ್ಬ ವ್ಯಕ್ತಿಯ ಘಟನೆಗಳನ್ನು ನೋಡುವ ಕ್ರಮವು ಆ ವ್ಯಕ್ತಿಯ ದೈಹಿಕ, ಮಾನಸಿಕ ಲಕ್ಷಣಗಳಿಂದ ಪ್ರಭಾವಿತವಾಗಿರುತ್ತದೆ. ಆದ್ದರಿಂದ ಪ್ರತಿಯೊಬ್ಬರ ಅನುಭವವೂ ಅನನ್ಯ ರೀತಿಯದು. ಸ್ತ್ರೀಯರು ಮತ್ತು ಪುರುಷರು ಅನೇಕ ಅನುಭವಗಳನ್ನು ಭಿನ್ನ ರೀತಿಯಿಂದ ಪಡೆಯುವುದು ಸಾಧ್ಯ.

ಬಿ.ಟಿ. ಜಾಹ್ನವಿ ಇವರು ಇತ್ತೀಚಿನ ಕಥೆಗಾರ್ತಿಯರಲ್ಲಿ ಪ್ರಮುಖರಾಗಿದ್ದಾರೆ. ಅವರು 'ಕಳೆದುಕೊಂಡವಳು ಮತ್ತು ಇತರ ಕಥೆಗಳು', 'ಹುಡುಕಾಟ' ಎಂಬ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಅವರ 'ವಿಮುಖ' ಕಥೆಯು ವೈವಾಹಿಕ ಸಂಬಂಧವನ್ನು ಪ್ರಮುಖ ವಸ್ತುವಾಗಿ ಬಳಸಲಾಗಿದೆ. ಹೀಗೆ ಅವರ ಕಥೆಗಳಲ್ಲಿ ದಲಿತ ಜೀವನ, ಗಂಡು–ಹೆಣ್ಣಿನ ಸಂಬಂಧ, ಸ್ತ್ರೀ ಸಮಸ್ಯೆಗಳು, ಸ್ತ್ರೀ ಶೋಷಣೆ ಇತ್ಯಾದಿ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತದೆ.

ಸುಮಂಗಲ ಬಾರದಿನ್ನೆ ಅವರ ಕಥೆಗಳು ಹಳೆಯ ವಸ್ತುಗಳಿಗೆ ಹೊಸತನವನ್ನು ತರುವಲ್ಲಿ ಯಶಸ್ವಿ ರಚನೆಗಳಾಗಿವೆ. ಇವರ ಕಥೆಗಳಲ್ಲಿ ಕೆಳ–ಮಧ್ಯಮ ವರ್ಗದ ಜೀವನದ ಚಿತ್ರಣವನ್ನು ಕಾಣಬಹುದಾಗಿದೆ. ಸಮಕಾಲೀನ ಸಮಾಜದ ಹೆಣ್ಣಿನ ಸಮಸ್ಯೆಗಳು, ಬಾಲಕಾರ್ಮಿಕ ಪದ್ಧತಿ, ಪುರುಷರ ಸ್ವಾರ್ಥತೆ, ವಿವಾಹವಾಗದ ಹೆಣ್ಣಿನ ಸಮಸ್ಯೆಗಳು ಅವರ ಕಥಾಸಾಹಿತ್ಯದ ವಸ್ತುವಾಗಿದೆ.

ಸುಮಂಗಲ ಅವರ ಕಥೆಗಳಲ್ಲಿ ಮನುಷ್ಯ ಸಂಬಂಧಗಳು ಜಾತಿ ಮೀರಿಯೂ ಮಿಡಿಯುತ್ತವೆ. ಕುಟುಂಬದ ಒಳಗಿನ ರಾಗ ದ್ವೇಷಗಳ ನಡುವೆ ಪ್ರೀತಿ ಜಿನುಗುವಂತೆ ಹೊರ ಸಂಬಂಧಗಳಲ್ಲಿಯೂ ಇದು ಕಾಣುತ್ತದೆ. ಸಮಾಜದಲ್ಲಿ ಕಾಣುವ ಅನೇಕ ಮುಖಗಳು ಇವರ ಕತೆಯಲ್ಲಿ ಬರುತ್ತವೆ. ಕೇವಲ ಕುಟುಂಬದ ಒಳಗೇ ಸುತ್ತುವುದಿಲ್ಲ. ಸಮಾಜದಲ್ಲಿ ವ್ಯಕ್ತವಾಗುವ ಸಾಮಾನ್ಯ ಅನ್ನಿಸುವ ಬದುಕಿನ ಘಟನೆಗಳನ್ನು ಕಥೆಯಾಗಿಸುವ ಕಲೆ ಇವರಿಗೆ ದಕ್ಕಿದೆ. ಹೀಗಾಗಿ ಕುಟುಂಬ, ಸಮಾಜ ಹಾಗೂ ವ್ಯಕ್ತಿಗತಿ ವಿಷಯಗಳನ್ನು ಒಂದು ಮಾನವೀಯ ನೆಲೆಯಲ್ಲಿ ಕಾಣಬಹುದು.

ಸುನಂದಾ ಪ್ರಕಾಶ ಕಥೆಗಾರ್ತಿಯರಲ್ಲಿ ಪ್ರಮುಖರಾದವರು. ಅವರು ಮೂಲತಃ ಉತ್ತರ ಕನ್ನಡ ಜಿಲ್ಲೆಯವರಾಗಿದ್ದು, ಕಥೆಗಳಲ್ಲಿ ಅವರ ಪ್ರಭಾವವನ್ನು ಬೀರಿದ್ದಾರೆ. ಅವರು 'ಪುಟ್ಟಪಾದದ ಗುರುತು', 'ಗಾಂಧೀ ಚಿತ್ರದ ನೋಟ', 'ಪಿಸುಗುಟ್ಟುವ ಬೆಟ್ಟಸಾಲು' ಇತ್ಯಾದಿ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಸುನಂದಾ ಅವರ ಕಿಚನ ಪ್ಯಾರಡೈಸ್ಯ ಮಗ ಚಿತ್ರ ಬರೆಯಿತು ಕಥೆಯು ಮಹತ್ವಾಕಾಂಕ್ಷಿಯಿಲ್ಲದ, ಭಾವನೆಗಳಿಲ್ಲದ ಯಾಂತ್ರಿಕ ಜೀವನ ನಡೆಸುತ್ತಿರುವ ಮಧ್ಯಮ ವರ್ಗದ ಜೀವನವನ್ನು ಕಾಣುತ್ತೇವೆ.

ಹಿರಿಯ ತಲೆಮಾರಿನ ಮಹಿಳಾ ಕಥೆಗಾರ್ತಿಯರು ಸರಸ್ವತಿ, ಬಾಯಿ ರಾಜವಾಡೆ, ಶ್ಯಾಮಲಾದೇವಿ ಬೆಳಗಾಂವಕರ, ಸಾವಿತ್ರಮ್ಮ, ಸರಸ್ವತಿದೇವಿ ಗೌಡರ, ಎನ್. ರಾವ್ ಮುಂತಾದವರು ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಮಹಿಳೆಯ ಬರವಣಿಗೆಯನ್ನು ಪುರುಷ ಪ್ರಧಾನ ಸಮಾಜ ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಆದರೆ ಪುರುಷನಿಗೆ ಇರುವಷ್ಟು ಮೇಧಾಶಕ್ತಿ, ಪ್ರತಿಭಾ ಸಂಪನ್ನತೆಗಳು ಸ್ತ್ರೀಯರಲ್ಲಿಯೂ ಸ್ವಾಭಾವಿಕ ಗುಣಗಳಿದ್ದು, ಅವು ಕೇವಲ ವಿಶಿಷ್ಟ ಸನ್ನಿವೇಶಗಳಲ್ಲಿ ಅಧಿಕವಾಗಿಯೇ ಕೌಶಲ್ಯಪೂರ್ಣವಾಗಿಯೇ ಹೊರಹೊಮ್ಮಿವೆ ಎಂದು ಲೇಖಕಿ ಶ್ರೀಮತಿ ತಿರುಮಲಾಂಬಾ ಅವರು ಪ್ರತಿಪಾದಿಸಿದ್ದಾರೆ.

ಹೀಗೆ ಇಪ್ಪತ್ತನೆಯ ಶತಮಾನದಲ್ಲಿ ಮುಖ್ಯ ಸಾಹಿತ್ಯವಾಗಿ ಮಹಿಳಾ ಸಾಹಿತ್ಯ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಲೇಖಕಿಯರು ತಮ್ಮದೇ ಆದ ನೆಲೆಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಗುರುತಿಸಿ ಜಾಗೃತಿ ಮೂಡಿಸಲಾಯಿತು. ಇಂದಿನ ಹೊಸ ತಲೆಮಾರಿನ ಲೇಖಕಿಯರು ಸಹ ತಮ್ಮದೇ ಆದ ಅಭಿವ್ಯಕ್ತಿಯಲ್ಲಿ ಆಧುನಿಕ ಉದ್ಯೋಗಸ್ಥ ಮಹಿಳೆಯ ವಿವಿಧ ಸಮಸ್ಯೆಗಳು ಕುರಿತು ಚಿಂತಿಸಿದ್ದಾರೆ. ಅವರ ಸಾಹಿತ್ಯದಲ್ಲಿ ಹೊಸ ಬಗೆಯ ಆಲೋಚನೆಯನ್ನು ಗುರುತಿಸಲಾಗಿದೆ. ಒಟ್ಟಾರೆ ಲೇಖಕಿಯರ ದೃಷ್ಟಿಕೋನಗಳು ಕಾಲದಿಂದ ಕಾಲಕ್ಕೆ ಭಿನ್ನವಾಗಿವೆ.

ಹೀಗೆ ನವೋದಯ ಕತೆ, ಕಾದಂಬರಿಯಿಂದ ಇತ್ತೀಚಿನ ಕತೆಗಾರ್ತಿಯರವರೆಗೂ ಬದಲಾದ ವಿವಿಧ ದೃಷ್ಟಿ ಧೋರಣೆಗಳನ್ನು ಗುರುತಿಸಲಾಗಿದೆ. ಕತೆಗಾರ್ತಿಯರ ಕತೆಗಳಲ್ಲಿ ವಸ್ತು, ಗ್ರಾಮೀಣ ಚಿತ್ರಣ, ಆಧುನಿಕತೆಯಲ್ಲಿ ನಗರೀಕರಣ ಹೇಗೆ ಕಂಡುಬಂದಿದೆ ಎಂಬುದನ್ನು ಕತೆಗಳಲ್ಲಿ ನೋಡಬಹುದು.

## ಓದಿಗೆ ನೆರವಾದ ಪುಸ್ತಕಗಳು


೧. ಗಿರಡ್ಡಿ ಗೋವಿಂದರಾಜು, ಕಲ್ಪಿತ ವಾಸ್ತವ

೨. ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕರ್ನಾಟಕ ಸರ್ಕಾರ-೧೯೮೫

೩. ಡಾ. ವೀಣಾ ಶಾಂತೇಶ್ವರ, ಲೇಖಕಿಯರ ಕಥಾಸಂಕಲನ, ಕರ್ನಾಟಕ ಸರ್ಕಾರ ಬೆಂಗಳೂರು-೧೯೮೩

೪. ತ್ರಿವೇಣಿಯವರ, ಸಮಸ್ಯೆಯ ಮಗು-೧೯೬೧

೫. ಅನುಪಮಾ, ಕಣ್ಮಣಿ, ಪುರೋಗಾಮಿ ಪ್ರಕಾಶನ, ಬೆಂಗಳೂರು-೧೯೫೨

೬. ಬಾನುಮುಷ್ತಾಕ್, ಹೆಜ್ಜೆ ಮೂಡಿದ ಹಾದಿ, ಸಂವಾದ ಪ್ರಕಾಶನ ಮಾಲಾಡಿಹಳ್ಳಿ-೧೯೯೦

೭. ಎಚ್. ನಾಗವೇಣಿ, ನಾಕನೇ ನೀರು, ಕನ್ನಡ ಸಂಘ, ಕ್ರೈಸ್ತಕಾಲೇಜು,ಬೆಂಗಳೂರು-೧೯೯೭

೮. ನೇಮಿಚಂದ್ರ, ಮತ್ತೆ ಬರೆದ ಕತೆಗಳು, ಶ್ರೀ ಪ್ರಕಾಶನ ಬೆಂಗಳೂರು-೧೯೯೨

# ಅಧ್ಯಾಯ – ೩

# ಲೇಖಕಿಯರ ಸಾಹಿತ್ಯದಲ್ಲಿ ಆಧುನಿಕತೆಯ ಪ್ರಭಾವ

ಕನ್ನಡ ಸಾಹಿತ್ಯದಲ್ಲಿ ನವೋದಯ ಯುಗವು ಒಂದು ಮಹತ್ವದ ಘಟ್ಟವಾಗಿದೆ. ಏಕೆಂದರೆ 'ನವೋದಯ' ಎನ್ನುವ ಪರಿಕಲ್ಪನೆಯೇ ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಸ್ಥಿತ್ಯಂತರಗೊಳ್ಳುವ ಸಾಂಸ್ಕೃತಿಕ ಪುನರುಜ್ಜೀವನ ಕಾಲ, ದೇಶಕ್ಕೆ–ದೇಶ, ನಾಡಿಗೆ–ನಾಡೇ ಹೊಸ ಪಲ್ಲಟವನ್ನು ಅನುಭವಿಸುವ ತಲ್ಲಣದ ಯುಗ, ವಸಾಹತು ಅನುಭವ ಎಂದು ಕರೆಯುವ ಪ್ರಕ್ರಿಯೆ ದ್ವವಾಗುತ್ತಿದ್ದ ಕಾಲ. ಇಂತಹ ಸಂದರ್ಭದಲ್ಲಿ ನವೋದಯ ಪೂರ್ವಸಾಹಿತ್ಯ ಪರಂಪರೆಯಲ್ಲಿ ಮನೆ ಮಾಡಿಕೊಂಡಿದ್ದ 'ಮೌಲ್ಯ'ಗಳು ಸ್ಥಿತ್ಯಂತರಗೊಳ್ಳುವ ಸಂಕ್ರಮಣ ಕಾಲದಲ್ಲಿ ಧಾರ್ಮಿಕ ಪರಧಿಯನ್ನು ದಾಟುವ ಪ್ರಕ್ರಿಯೆಯಲ್ಲಿ ನಮ್ಮ ದೇಶಕ್ಕೆ ಫಲಿತಗಳಿಂದ ಡಾಂಬರ ರಸ್ತೆ, ರೈಲು, ಟಿಲಿಗ್ರಾಂ,ದೂರವಾಣಿ, ಸಾರಿಗೆ ಸಂಪರ್ಕ ಮಾಧ್ಯಮಗಳ ಪ್ರವೇಶದಿಂದ ದಿಗ್ಭ್ರಮೆಗೊಂಡು ಇಹ ಲೋಕದ ಬಗ್ಗೆ ಅರಿವು ಹೆಚ್ಚಾಯಿತು. ಈ ಅರಿವಿನಿಂದ ನಮ್ಮ ಮಧ್ಯಮ ವರ್ಗದ ಜೀವನಾನುಭವ ಮತ್ತು ಧೋರಣೆಯಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಜೊತೆಗೆ ಇಂಗ್ಲೆಂಡಿನ ರಾಜಕೀಯ ಚರಿತ್ರೆ, ಪ್ರಜಾಪ್ರಭುತ್ವ, ವ್ಯಕ್ತಿ ಸ್ವಾತಂತ್ರ್ಯ, ಸಮಾನತೆಯ ಬಗ್ಗೆ ವೈಚಾರಿಕವಾಗಿ ಆಲೋಚಿಸುವ ಭಿನ್ನ ದೃಷ್ಟಿಕೋನವೊಂದು ರೂಪಗೊಂಡಿತು. ಈ ಎಲ್ಲಾ ಒಪ್ಪಂದದಲ್ಲಿ ಕೈಗಾರೀಕರಣ, ನಗರೀಕರಣಗಳ ಜೊತೆ ಜೊತೆಯಲ್ಲಿ ಇಂಗ್ಲೀಂಷ್ ಸಾಹಿತ್ಯದ ಅಭ್ಯಾಸ ನಮ್ಮ ಭಾರತೀಯರಲ್ಲಿ ಅಂಕುರಿಸಿ, ನಮ್ಮ ಕಲ್ಪನೆಗೆ ನಿಲುಕದ ವಿವಿಧ ಪ್ರಕಾರಗಳು ಪರಿಚಯವಾದವು. ಈ ಪರಿಚಯದಿಂದ ನಮ್ಮ ಭಾರತೀಯ ಮಧ್ಯಮ ವರ್ಗದ ಸಾಮಾಜಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಒಟ್ಟಾರೆ ಸಾಂಸ್ಕೃತಿಕ, ವೈಜ್ಞಾನಿಕ ಮನೋಧರ್ಮ ಉಂಟಾಗಿ ಬದಲಾವಣೆಯ ಗುಣವನ್ನು ಹೊಂದಿದೆ.

ಹೀಗೆ ಇಂಗ್ಲೀಷ್ ಸಾಹಿತ್ಯದ ಪ್ರಭಾವ, ಪ್ರೇರಣೆಯಿಂದ ಕಾದಂಬರಿ, ಕತೆಗಳಲ್ಲಿ ಪ್ರಕಾರ, ಶೈಲಿ, ವಸ್ತು, ತಂತ್ರ ವಿಷಯಗಳಲ್ಲಿ ಹೊಸ ಸಂವೇದನೆಯನ್ನು ಹುಟ್ಟುಹಾಕುತ್ತವೆ. ವೀಣಾ ಶಾಮತೇಶ್ವರ, ವೈದೇಹಿ, ಬಿ.ಟಿ. ಜಾಹ್ನವಿ, ಸುಮಂಗಲಾ, ರೇಖಾರಾಣಿ, ಎಂ.ಎಸ್. ವೇದಾ ಮೊದಲಾದವರ ಸಾಹಿತ್ಯದಲ್ಲಿ ಆಧುನಿಕತೆಯನ್ನು ಕಾಣಬಹುದು.

ಮಹಿಳೆಯರ ಬರಹ ತನ್ನ ಮಗ್ಗುಲನ್ನು ಬದಲಾಯಿಸಿ ಹಳೆತನದಿಂದ ಮೈಕೊಡವಿಕೊಂಡ ಹೊಸ ಸಂವೇದನೆಗಳತ್ತ ಕಣ್ಣು ಚಾಚುತ್ತಿರುವ ಪ್ರಯತ್ನದಲ್ಲಿ ವೀಣಾ ಶಾಂತೇಶ್ವರವರು 'ಮುಳ್ಳುಗಳು' ಕಥಾಸಂಕಲನದ ಮೂಲಕ ಸಾಹಿತ್ಯ ಜಗತ್ತನ್ನು ಪ್ರವೇಶಿಸಿದರು. ಇವರು ತಮ್ಮ ಕಥೆಗಳಲ್ಲಿ ಬದುಕಿನ ಸಂಕೀರ್ಣತೆಯನ್ನು ಮೂಡಿಸಿದ್ದರು. ಸೂಕ್ಷ್ಮ ಮನಸ್ಸಿನ ಹೆಣ್ಣೊಬ್ಬಳು ತನ್ನೊಳಗಿನ ಭಾವನೆಗಳಿಗೆ ಮುಖಾಮುಖಿಯಾಗುವ ತಾನು ಬಯಸಿದ ಆದರ್ಶಗಳನ್ನು ವಾಸ್ತವತೆಗೆ ತರುವ ಆಧುನಿಕ ಹೆಣ್ಣೊಬ್ಬಳ ಚಿತ್ರಣ ವೀಣಾ ಅವರ ಕತೆಗಳಲ್ಲಿ ವ್ಯಕ್ತವಾಗಿದೆ. ಇವರ ಖತೆಗಳಲ್ಲಿ ಬಹುಪಾಲು ನಾಯಕಿಯರು ಆತ್ಮವಿಶ್ವಾಸ ಪ್ರತಿಭಟನೆ ಧನಿಯಿರುವವರಾಗಿದ್ದಾರೆ.

ವೀಣಾ ಅವರ ಕತೆಯಾದ 'ಮುಳ್ಳುಗಳು' ಕತೆಯಲ್ಲಿ ಶಿಕ್ಷಣ ಪಡೆದ ಉದ್ಯೋಗಸ್ಥೆಯಾದ ಶಾಂತಿ ಹಾಸ್ಟೆಲ್‌ನಲ್ಲಿ ವಾಸಮಾಡುತ್ತಿರುವ ಅವಿವಾಹಿತೆ. ಈಕೆಗೆ ಎಲ್ಲಾ ಕಡೆ ಮುಳ್ಳು ಜನಗಳ ಅನುಭವವಾಗುತ್ತದೆ. ತನ್ನ ಪಾಠಕೇಳಿದ ವಿದ್ಯಾರ್ಥಿಗಳು, ದಾರಿ ಹೋಕರು, ಹಾಸ್ಟೆಲಿನ ಕಸಗುಡಿಸುವ ಮಾದ, ಹಾಸ್ಟೆಲಿನ ಮುಂದೆ ಸದಾ ಬಾಲ ಅಲ್ಲಾಡಿಸುತ್ತಿರುವ ಗಂಡುನಾಯಿ ಎಲ್ಲರ ಕಣ್ಣುಗಳು ಚುಚ್ಚು ಮುಳ್ಳುಗಳಿರುವಂತೆ ಅನಿಸಿ ಶಾಂತಿ ಹಿಂಸೆ ಪಡುತ್ತಾಳೆ. ತಾನೊಬ್ಬ ಹೆಣ್ಣಾಗಿ ಬದುಕು ಕಟ್ಟಿಕೊಳ್ಳುತ್ತಿರುವ ಜೀವನಾನುಭವಗಳನ್ನು ನಿವೇದಿಸಿಕೊಳ್ಳುತ್ತಾಳೆ. ಮುಳ್ಳು ಮನಸ್ಸಿನ ವ್ಯಕ್ತಿಗಳ ಮಧ್ಯೆ ಶಾಂತಿ ಸೊರಗಿ ಹೋಗುತ್ತಾಳೆ. ಆಕೆಯ ಕೊನೆಯ ತರ್ಮಾನವೆಂದರೆ "ಈ ಮುಳ್ಳಿನಂಥ ದೃಷ್ಟಿಯೊಂದೇ ಸತ್ಯ. ಉಳಿದೆಲ್ಲ ಭ್ರಮೆ, ರಸ್ತೆಯಲ್ಲಿ, ಕಾಲೇಜನಲ್ಲಿ, ,ಬಸ್ಸಿನಲ್ಲಿ, ಟ್ರೇನ್‌ನಲ್ಲಿ, ಮಾರ್ಕೆಟಿನಲ್ಲಿ ಈ ಇಡೀ ಜಗತ್ತಿನ ತುಂಬ ಸತ್ಯವಾದುದೆಂದರೆ ಅದೊಂದೇ."

ಶಾಂತಿ ಕಣ್ಣುಗಳಲ್ಲಿ ಮುಳ್ಳುಗಳಿಲ್ಲದಿರುವ ಗಂಡಸಿಗಾಗಿ ನಿರಂತರವಾದ ಹುಡುಕಾಟಕ್ಕೆ ತೊಡಗುತ್ತಾಳೆ. ಆಕೆಗೆ ಹತ್ತಿರವಾದ ದೇಸಾಯಿಯ ಕಣ್ಣಲ್ಲಿ ಮುಳ್ಳುಗಳಿರುವೋ ಇಲ್ಲವೋ ಎಂಬ ಅವಳ ಅನುಮಾನದಲ್ಲಿ ಕತೆ ಮುಗಿರುತ್ತದೆ. ಪಿತೃ ಪ್ರಧಾನ ವ್ಯವಸ್ಥೆಯಲ್ಲಿ ಸೂಕ್ಷ್ಮ ಮನಸ್ಸಿನ ಸ್ತ್ರೀಯೊಬ್ಬಳು ಅನುಭವಿಸುವ ಸ್ತ್ರೀ ವಿಶಿಷ್ಟ ಅನುಭವ ಇದು. ಜಗತ್ತು ತನ್ನನ್ನು ಅನುಮಾನಿಸುತ್ತದೆ. ಇಡೀ ಜಗತ್ತಿನ ವಿರುದ್ಧ ಬಂಡೇಳಬೇಕು, ಒಬ್ಬರನ್ನೊಬ್ಬರನ್ನಾಗಿ ಎಲ್ಲರನ್ನೂ ಜೀವಂತ ಸುಡಬೇಕು. ಕೊನೆಗೆ ತಾನೂ ಅದೇ ಬೆಂಕಿಯಲ್ಲಿ ಬಿದ್ದು ಹೋಗಬೇಕೆಂಬ ರೊಚ್ಚಿನ ಮಾತುಗಳನ್ನಾಡುವ ಶಾಂತಿ, ಹೊಸ ಸಾಮಾಜಿಕ ವ್ಯವಸ್ಥೆಯ ಪರಿವರ್ತನೆಗೆ ಹಂಬಲಿಸುವ ಕನಸು ಆಕೆಯಲ್ಲಿರುತ್ತದೆ.

ವೀಣಾ ಅವರ ಕತೆ, ಕಾದಂಬರಿಗಳಲ್ಲಿ ಚಿತ್ರಿತವಾಗುವ ಹೆಣ್ಣು ತಮ್ಮ ಬದುಕಿನ ಆಯ್ಕೆಗಳನ್ನು ತಾವೇ ಮಾಡಿಕೊಳ್ಳುವ ಶಕ್ತಿಯುಳ್ಳವರಾಗಿರುತ್ತಾರೆ. ತಮ್ಮ ಬಾಳ ಸಂಗಾತಿಗಳಿಂದ ಹಿಡಿದು ತಮ್ಮ ತಾಯ್ತನದ ಆಯ್ಕೆಯನ್ನೂ ಮಾಡಿಕೊಳ್ಳುವ ದೃಢ ಮನಸ್ಸಿನವಳಾಗಿರುತ್ತಾಳೆ. ವೀಣಾ ಅವರು ಬದಲಾಗುತ್ತಿರುವ ಆಧುನಿಕ ಹೆಣ್ಣಿನ ಸಂವೇದನೆಯನ್ನು ಚಿತ್ರಿಸುವ ಪ್ರಯತ್ನ ಮಾಡುತ್ತಾರೆ. ಅವರ 'ಗಂಡಸರು' ಕಾದಂಬರಿ ಮುಖ್ಯವಾಗಿ ಗಂಡಸರ ಪೂರ್ವಾಗ್ರಹ ಪೀಡಿತ ಮನೋಭಾವವನ್ನು ನಿರೂಪಿಸುತ್ತದೆ. ಪ್ರೇಮದ ವಿಚಾರದಲ್ಲಿ ಅವರು ನಡೆಸುವ ಬಣ್ಣಗಾರಿಕೆ, ಹಾಕಿಕೊಳ್ಳುವ ಮುಖವಾಡಗಳನ್ನು ಕಳಚಿ ಅವರ ಸಣ್ಣತನಗಳನ್ನು ದೈಹಿಕ ನೆಲೆಯಿಂದಲೇ ತನ್ನೊಂದಿಗೆ ಪುರುಷರ ನಡುವೆ ತನ್ನ ವ್ಯಕ್ತಿತ್ವ ಉಳಿಸಿಕೊಳ್ಳುವಲ್ಲಿ ಹೋರಾಟ ಮಾಡುತ್ತಾಳೆ.

ಇವರ ಕತೆಗಳಲ್ಲಿ 'ಬಿಡುಗಡೆ'ಗಾಗಿ ಹಂಬಲಿಸುವ ಹೆಣ್ಣುಗಳ ಮಾದರಿ ಕಂಡುಬರುತ್ತದೆ. ಇವರ 'ಬಿಡುಗಡೆ' ಕಥೆಯ ನಾಯಕಿ ಗಂಡನ ಕ್ರೌರ್ಯ, ಹಿಂಸೆ, ದಬ್ಬಾಳಿಕೆಗಳಿಂದ ನೊಂದ ಹೆಣ್ಣು, ಗಂಡ ಸತ್ತಾಗ ಅವಳಿಗೆ ಆನಂದವಾಗುತ್ತದೆ. ಅಡಿಗೆ ಮನೆಯೊಳಗೆ ಹೋಗಿ ಲೋಟದ ತುಂಬ ಹಾಲನ್ನು ಗಟಗಟನೆ ಕುಡಿಯುತ್ತಾಳೆ. ಅವಳ ಕಣ್ಣೀರೇನಿದ್ದರೂ ಬದುಕಿದ್ದಾಗ ಗಂಡನಿಂದಾಗಿ ತನ್ನ ಹಣ್ಣಿನೊಳಗೆ ತುಂಬಿದ್ದ ಕನಸುಗಳು ಚೂರಾಗಿದ್ದಕ್ಕೆ ನಿವಹ, ಅವರ ಸಾವಿಗಾಗಿ ಆಗಿರುವುದಿಲ್ಲ. ಅವನ ಸಾವು ತನಗೆ ನಿಜವಾದ ಬಿಡುಗಡೆಯನ್ನು ಒದಗಿಸಿದೆ ಎಂಬ ಭಾವನೆಯನ್ನು ಹೊಂದಿರುತ್ತಾಳೆ. ಇವರ ಬಹುಪಾಲು ಕಥೆಗಳಲ್ಲಿ ಕಾಣಿಸಿಕೊಳ್ಳುವ ನಾಯಕಿಯರು ಉದ್ಯೋಗಸ್ಥರು ಮುಂಬಯಿಯಂತಹ ನವನಾಗರೀಕ ಜಗತ್ತಿನಲ್ಲಿ ಬದುಕುತ್ತಿರುವವರು. ಆರ್ಥಿಕ ಸ್ವಾತಂತ್ರ್ಯ ಹಾಗೂ ಸ್ವಾವಲಂಬಿಗಳಾಗಿದ್ದು ತಮ್ಮ ಮೇಲೆ ಆಗುತ್ತಿರುವ ಶೋಷಣೆಯನ್ನು ಅರ್ಥಮಾಡಿಕೊಂಡು ಸ್ವತಂತ್ರ್ಯವಾದ ಆಯ್ಕೆಯನ್ನು, ನಿರ್ಧಾರವನ್ನು ಕಾಣಬಹುದಾಗಿದೆ. ಅವರ ಬಹುಪಾಲು ಕಥೆಗಳು ನವ್ಯ ಪುರುಷ ಲೇಖಕರು ಚಿತ್ರಿಸುವ ಸ್ತ್ರೀ ಪಾತ್ರಗಳಿಗೆ ವಿರುದ್ಧವಾಗಿ ಹೆಣ್ಣನ್ನು ಚಿತ್ರಿಸಲಾಗಿದೆ. ವೀಣಾ ಅವರು ಸಮಕಾಲೀನ ಸಾಹಿತ್ಯದ ಧೋರಣೆ, ವೈಚಾರಿಕ ಚಿಂತನೆಗಳಿಗೆ ತಮ್ಮನ್ನು ತಾವು ತೆರೆದುಕೊಂಡರು.

ಸ್ತ್ರೀ–ಪುರುಷ ಸಂಬಂಧದ ಅವರ ಪಾತ್ರಗಳ ವಿವಾಹದ ಬಗ್ಗೆಗೆ ಶಂಕೆಯನ್ನು ವ್ಯಕ್ತಪಡಿಸುತ್ತವೆ. ಆದರೆ 'ತಾಯ್ತನ'ವನ್ನು ನಿರಾಕರಿಸುವುದಿಲ್ಲ. ಕೆಲವೊಮ್ಮೆ 'ತಾಯ್ತನ'ಕ್ಕೆ ಹಪಹಪಿಸುವ ಲಿಲಿಯಂಥ ಮಾದರಿಗಳೂ ಕಂಡುಬರುತ್ತವೆ. ಹೆಣ್ಣಿನ ದ್ವಂದ್ವವೆಂದರೆ 'ಗಂಡ'ನ ದಬ್ಬಾಳಿಕೆ, ದೌರ್ಜನ್ಯ, ಶೋಷನೆಗಳಿಂದ ವಿಮೋಚನೆ ಪಡೆಯುತ್ತ ಜನ್ಮಸಿದ್ಧ ಹಕ್ಕಾದ ತಾಯ್ತನವನ್ನು ಆಯ್ಕೆಮಾಡಿಕೊಳ್ಳುವುದು ಆಗಿರುತ್ತದೆ.

ವೀಣಾ ಶಾಂತೇಶ್ವರರ ಈ ಕಥಾ ಸಾಹಿತ್ಯದ ಹಿಂದೆ ರೂಢಿಗತ ಮೌಲ್ಯಗಳು ಕಟ್ಟಿಕೊಡುವ ಅರಿವನ್ನು ಪ್ರಶ್ನಿಸಿ, ಧಿಕ್ಕರಿಸಿ ತನ್ನ ಅನುಭವದ ಹಿನ್ನೆಲೆಯಲ್ಲಿ ಹೊಸ ಅರಿವನ್ನು ಮೂಡಿಸುವ ಮತ್ತು ಹೊಸ ಹುಡುಕಾಟವನ್ನು ಅನೇಕ ಪಾತ್ರಗಳು ಶೋಧಿಸುತ್ತವೆ. ಇಲ್ಲಿನ ಕಥೆಗಳಲ್ಲಿ ಹೆಣ್ಣಿನ

ಘನತೆಯನ್ನು ಬೇರೆ ಬೇರೆ ನೆಲೆಯಲ್ಲಿ ಚಿತ್ರಿಸಿದ್ದಾರೆ. ವೀಣಾ ಅವರು ಸೋಲು, ಗೆಲವುಗಳೇನೇ ನಇದ್ದರೂ ಸೃಜನಶೀಲತೆಯ ಹೊಸ ಪರಿಭಾಷೆಯನ್ನು ಆಧುನಿಕ ಮಹಿಳೆಯಲ್ಲಿ ಮೂಡಿಸುವ ಪ್ರಯತ್ನವನ್ನು ನೋಡಬಹುದು. ವೀಣಾ ಅವರ ಕತೆಗಳ ನಾಯಕಿಯರೂ ಸಮಸ್ಯೆಗಳನ್ನು ಮುಖಾಮುಖಿಯಾಗಿ ಎದುರಿಸುತ್ತಾರೆ. ತಮ್ಮ ಭವಿಷ್ಯವನ್ನು ಗಂಡ, ಅಪ್ಪ, ಸಮಾಜ, ಧರ್ಮಗಳ ಕೈಗೆ ಕೊಡದೇ ತಾವೇ ನಿರ್ಧರಿಸುತ್ತಾರೆ. ಇವರ ನಿಲುವುಗಳು ಸ್ತ್ರೀ ಪರವಾಗಿದ್ದರೂ ಅವು ಎಲ್ಲೂ ಘೋಷಣೆಯ ರೂಪ ತಾಳುವುದಿಲ್ಲ. ಕಥೆಯ ಸಂದರ್ಭದಲ್ಲಿಯೇ ಅವು ಸಹಜವೆಂಬಂತೆ ಹೊಮ್ಮುತ್ತವೆ. ಪುರುಷರ ನಯ ವಂಚನೆ, ಹೇಡಿತನ, ಸಂಪ್ರದಾಯ, ಶರಣತೆಗಳನ್ನು ಕಥೆಯ ಮೂಲಕವೇ ಹೆಣೆಯುತ್ತಾರೆ.

'ವೈದೇಹಿ' ಪ್ರಮುಖ ಕೆಗಾರ್ತಿ. ಸಣ್ಣ ಕತೆಯ ಮೂಲಕ ಸಾಹಿತ್ಯವನ್ನು ಪ್ರವೇಶಿಸಿದರು. ಇವರ ಕತೆಗಳಲ್ಲಿ ದಕ್ಷಣ ಕನ್ನಡದ ಪರಿಸರ ವೈಶಿಷ್ಟತೆ ಹಾಗೂ ಕುಂದಾಪುರದ ಆಡುನುಡಿಯನ್ನು ಕಾಣಬಹುದು. ಸೂಕ್ಷ್ಮ ಚಿತ್ರಗಳು ಕೇಂದ್ರವಾಗಿವೆ. 'ಸುಮ್ಮನಿರಲಾರದ್ದು' ಕತೆಯಲ್ಲಿ ಇಬ್ಬರ ಸ್ತ್ರೀಯರು ಭೀಕರತೆಯನ್ನು ಹೇಳುತ್ತದೆ. "ಈಗಲೂ ನಡುರಾತ್ರಿ ಒಮ್ಮೊಮ್ಮೆ ಅದು ನೆನಪಾಯಿತೆಂದರೆ ನರ್ಮದಾ ಬೆಚ್ಚಿ ಬೀಳುತ್ತಾಳೆ. ಸಟಕ್ಕನೆ ಎದ್ದು ಕುಳಿತು ಅಸ್ವಸ್ಥಳಾಗುತ್ತಾಳೆ. ಯಾರೊಡನಾದರೂ ಅದನ್ನು ಹೇಳಿಕೊಳ್ಳಬೇಕು, ತಾನೂ ಕೂಡ ಯಾರೊಡನೆ" ಎಂದು ತನಗೆ ತಾನೇ ಹೇಳಿಕೊಳ್ಳುವ ನರ್ಮದಾ ಮಧುರ ದಾಂಪತ್ಯದ ಸವಿಯನ್ನುಂಡಳು. ಈಕೆಯ ಗಂಡ, ಮಕ್ಕಳ ಬಳಿಗೆ ಹೋಗಲು ರೈಲು ಹತ್ತಿಸಿ ಮುಟ್ಟಿದ ತಕ್ಷಣ ಟೆಲಿಗ್ರಾಂ ಮಾಡಲು ತಿಳಿಸುತ್ತಿದ್ದಂತೆ ರೈಲು ಹೊರಡತೊಡಗುತ್ತದೆ. ನರ್ಮದಾ ಕುಳಿತ ಕಂಪಾರ್ಟಮೆಂಟ್‌ಗೆ ಬಂದು ಎದುರಿಗೆ ಕುಳಿತ ಹೆಂಗಸನ್ನು ನೋಡಿದಾಗಗಗಗಗ ಆಕೆಯನ್ನು ಯಾವುದೋ ಭಯ ಮನೆ ಮಾಡಿಕೊಂಡಿರುವುದು ನರ್ಮದಾಳಿಗೆ ಗೋಚರವಾಗುತ್ತದೆ. ಆ ಹೆಂಗಸಿನ ಜೊತೆ ಮಾತನಾಡತೊಡಗುತ್ತಾಳೆ. ಆಕೆ ತನ್ನ ದುರಂತದ ಬದುಕಿನ ಕತೆಯನ್ನು ನರ್ಮದಾ ಮುಂದೆ ಬಿಚ್ಚಿಕೊಳ್ಳುತ್ತಾಳೆ.

ಆ ಹೆಂಗಸು ಕತೆ ಹೇಳತೊಡಗುತ್ತಾಳೆ. ತಾಯಿ ಖಾಯಿಲೆಯಿಂದ ನೊಂದು ಹೋಗಿರುವುದು ಆಕೆಯಿಂದ ಆಸ್ಪತ್ರೆಯಿಂದ ಬಿಡಿಸಿ ತಂದು ಗಂಡನ ಮನೆಯಲ್ಲಿಟ್ಟುಕೊಳ್ಳುವುದು ಸಾಧ್ಯವಾಗದಿರುವುದು ಗಂಡನ ಉಪಟಳ ಹಂಗಿನ ಅನ್ನದಲ್ಲಿ ತಾಯಿಯನ್ನಿಡಬಾರದೆಂದು ತಾನು ತೆಗೆದುಕೊಂಡ ನಿರ್ಧಾರದಲ್ಲಿ ಮಕ್ಕಳ ಚಿಂತೆ ಅವಳನ್ನು ಕಾಡಿದ್ದು ನಂತರ ತಾಯಿಯನ್ನು ಬೇರೆಯಿಟ್ಟರೆ ಮಕ್ಕಳ ಮೇಲೆ ಪರಿಣಾಮ ಬೀರಿ ಆ ಮಕ್ಕಳೂ ತನ್ನನ್ನು ಮುಪ್ಪಿನ ಕಾಲದಲ್ಲಿ ಹಾಗೆಯೇ ನೋಡಿಕೊಳ್ಳುತ್ತಾರೆಂಬ ಭಯ ಕಾಡಿದ್ದು, ಕೊನೆಯಲ್ಲಿ ತಮ್ಮ ಮನೆಯ ಬಡತನ, ಗಂಡನ ಉಪಟಳ, ತಾಯಿಯ ವಾಸಿಯಾಗದ ಕಾಯಿಲೆ, ಅಸಹಾಯಕತೆ ಹೆಚ್ಚಾಗುತ್ತಾ ಕೊನೆಗೆ ಆ ಹೆಂಗಸು ಜನ್ಮ ನೀಡಿದ

ಯಾಯಿಯನ್ನೇ ಕೊಲೆ ಮಾಡಿ ರೈಲಿನಲ್ಲಿ ನರ್ಮದಾಳ ಮುಂದೆ ಕುಳಿತಿಕೊಂಡಿದ್ದಾಳೆ. ಮೇಲಿನ ಎಲ್ಲಾ ಕತೆಯನ್ನು ಕೇಳುವ ನರ್ಮದಾ ತಲ್ಲಣಗೊಳ್ಳುತ್ತಾಳೆ. ಯಾವುದೋ ದೂರದ ಊರಿನಲ್ಲಿ ಇಳಿಯಬೇಕೆಂದುಕೊಂಡ ಆಕೆ ದಾರಿಯಲ್ಲೆ ಇಳಿದು ದಡದಡನೆ ಇಳಿದು ಹೋದ ಆ ಹೆಂಗಸಿನ ಬಗ್ಗೆ ತಲ್ಲಣಗೊಂಡು ಯೋಚಿಸುತ್ತಾಳೆ. ಆದರೆ ಪಯಣದಲ್ಲಿ ಜೊತೆಯಾದ ಹೆಂಗಸು ನಾನಾ ಸಂಕಟಗಳಿಗೆ, ನೋವುಗಳಿಗೆ ಒಳಗಾಗಿ ಕೊನೆಗೆ ತಾಯಿಯನ್ನೇ ಕೊಲೆ ಮಾಡಿ ನೆಲೆ ಕಳೆದುಕೊಂಡು ಹೊಸ ದಿಕ್ಕಿಗೆ ಬದುಕು ಹುಡುಕಿಕೊಂಡು ಹೊರಟವಳು ಸ್ತ್ರೀಯರ ಬದುಕು ನಾನಾ ನೆಲೆಗಳಲ್ಲಿ ಸ್ಥಿತ್ಯಂತರಗೊಳ್ಳುತ್ತಿರುವುದು ಹೊಸ ಶತಮಾನದ ಅಂಚಿನಲ್ಲಿ ಕಾಣಬಹುದು.

'ಸೌಗಂಧಿಯ ಸ್ವಗತಗಳು' ಕತೆಯ ನಾಯಕಿ ಸೌಗಂಧಿ ಶಿಕ್ಷಣ ಪಡೆದ ಹೊಸ ಜಗತ್ತಿನ ಆಳ ತಿಳಿದ ಉದ್ಯೋಗಸ್ಥ ಮಹಿಳೆ, ಸ್ತ್ರೀಯಾದ ಈಕೆಯ ವ್ಯಕ್ತಿ ಸ್ವಾತಂತ್ರ್ಯಕ್ಕೆ ಬೆಲೆಕೊಡದ ತಂದೆ, ತಾಯಿ ಮತ್ತು ಸುತ್ತಮುತ್ತಲಿನವರುಸೌಗಂಧಿಯ ಬದುಕನ್ನು ನರಕವಾಗಿಸುತ್ತಾರೆ. ಅವಳ ಯೋಚನೆಗಳು ತಾನೊಬ್ಬಳೇ ಒಂಟಿಯಾಗಿ ಮನೆಯಲ್ಲಿರುವಾಗ ಸ್ವಾತಂತ್ರ್ಯ ಸುಖಕ್ಕಾಗಿ ಹಂಬಲಿಸುತ್ತಾಳೆ. ದೈನಂದಿನ ಲಯ, ಬಂಧಿತ ಅಸ್ಥಿತ್ವಗಳಿಂದ ರೋಸಿಹೋಗಿ ಹೀಗೆ ಹೊಸ ರೀತಿಯ ಬದುಕನ್ನು ಸೃಷ್ಟಿಸಲು ಮುಂದಾಗುತ್ತಾರೆ.

'ಚಿಪ್ಪ' ಕತೆಯಲ್ಲಿ ವೈದೇಹಿಯವರು ಪುರುಷ ಪ್ರಧಾನ ಸಮಾಜ ರೂಢಿಗೆ ತಂದಿರುವ ಕೆಲವು ಮೌಲ್ಯಗಳ ವಿರುದ್ಧ ಪ್ರಶ್ನೆಗಳನ್ನು ಎತ್ತುತ್ತಾಳೆ. ಈ ಕತೆಯಲ್ಲಿ ಬರುವ ಯಶೋಧ ತನ್ನೊಳಗಿನ ಮಾತುಗಳನ್ನು ಹೇಳುವ ಸ್ಥೈರ್ಯವನ್ನು ಕಳೆದುಕೊಂಡಿರುತ್ತಾಳೆ. ಹಳೆಯ ಪಾಠಗಳು ಮತ್ತು ಹೊಸ ಆಲೋಚನೆಗಳ ನಡುವೆ ಅಸ್ಥವ್ಯಸ್ತಳಾಗುತ್ತಾಳೆ. "ಈ ಮದುವೆ, ಆರಕ್ಷತೆ, ಈ ಶಬ್ದಗಳೇ ಅಸಹ್ಯವೆನಿಸುತ್ತದೆ. ಇಷ್ಟಕ್ಕೂ ಮದುವೆ ನಿಜಕ್ಕೂ ತನಗೆ ಬೇಕೆ"[೨] ಈ ಸಂಪ್ರದಾಯ ಮದುವೆಗಳ ಆಚೆ ಸ್ತ್ರೀ ಚೈತನ್ಯ ಬದುಕು ಸ್ವಾತಂತ್ರ್ಯ ಸ್ವಾವಂಬಿಯಾಗಿ ಅರಳಬೇಕೆಂದು ಬಯಸುತ್ತಾಳೆ.

'ಗುಲಾಬಿ ಮೃದ ಪಾದಗಳು' ಈ ಕಥೆಯ ಪರಿಸರ ನಗರ ಪ್ರಧಾನವಾದದು. ಈ ಕತೆಯ ಸರಿತಾ ಕಛೇರಿಯಲ್ಲಿ ಉದ್ಯೋಗಸ್ಥ ಮಹಿಳೆ. ಆಕೆ ಇರು ಸ್ಥಳ ರಸ್ತೆಯಲ್ಲಿರುವ ಮನೆ, ದಾರಿ ಅವಳಿಗೆ ಪರಿಚಿತ. ಆ ಮನೆಗೆ ಎಲ್ಲಿಂದಲೊ ಯಾರೋ ಬಂದಾಗ ಅವರ ಜೊತೆಯಲ್ಲಿ ಒಂದು ಎಳೆಯ ಮಗು ಬರುತ್ತದೆ. ಆ ಮಗುವಿನ ಪಾದಗಳನ್ನು ಸರಿತಾ ನೋಡಿ ಆಕರ್ಷಿತಳಾಗುತ್ತಾಳೆ. ತಾನು ಹೋಗಿ ಆ ಮಗುವನ್ನು ನೋಡಬೇಕು, ಅದನ್ನು ಮಾತನಾಡಿಸಬೇಕು, ಅದರ ಜೊತೆ ಆಡಬೇಕು ಅನಿಸುತ್ತದೆ. ಆದರೆ ಅದು ಸಾಧ್ಯವಾಗುವುದಿಲ್ಲ. ಇದಕ್ಕೆ ಅವಳಲ್ಲಿ ಸಹಜವಾಗಿರುವ ಸಂಕೋಚ ಪ್ರವೃತ್ತಿ ಈ ಸಂಕೋಚ ಅವಳಿಗೆ ಹುಟ್ಟಿದ್ದು ತಾನು ಪಡೆದ ಆಧುನಿಕ ವಿದ್ಯಾಭ್ಯಾಸದಿಂದ ಕೊನೆಗೂ ಆಕೆ ಆ ಮಗುವನ್ನು ನೋಡಲು ಆಗುವುದಿಲ್ಲ. ಗ್ರಾಮೀಣ ಪರಿಸರಕ್ಕೆ 'ಸಿನೆಮಾ ಟಾಕೀಸ್'

ಬಂದಾಗ' ಸ್ತ್ರೀ ಜಗತ್ತಿನಲ್ಲಿ ಆದ ಬದಲಾವಣೆಯನ್ನು ನೋಡಬಹುದು. ವೈದೇಹಿಯವರು ಕಥೆಗಳಲ್ಲಿ ಹೆಚ್ಚಾಗಿ ಸ್ತ್ರೀ ಸ್ವಾಭಿಮಾನ ಚಿತ್ರಗಳು ಕಂಡುಬರುತ್ತವೆ.

ಆಧುನಿಕ ಕನ್ನಡ ಕಥಾ ಸಾಹಿತ್ಯದ ಸಂದರ್ಭದಲ್ಲಿ ಕತೆಗಾರ್ತಿ ನೇಮಿಚಂದ್ರರು ಪ್ರಮುಖರಾಗಿದ್ದಾರೆ. ಇವರ 'ಕೆಂಪು ಕಲಕಿದ ನೀರು' ಕತೆಯಲ್ಲಿ ಬರುವ 'ಶೀಲ' ಎಂಬುವಳು ಅನೇಕ ತೊಡಕುಗಳ ನಡುವೆ ಬದುಕು ಬದಲಿಸಬೇಕೆಂಬ ನಿರ್ಧಾರದಿಂದ ಉದ್ಯೋಗಕ್ಕೆ ಸೇರಿದವಳು. ಈಕೆ 'ಕುರುಕ್ಷೇತ್ರ'ದ ರೀಜನಲ್ ಇಂಜನಿಯರಿಂಗ್ ಕಾಲೇಜಿಗೆ ಉಪನ್ಯಾಸಕಿಯಾಗಿ ಬೆಂಗಳೂರಿನಿಂದ ಬಂದ ಈ ಶೀಲ ಆ ನೆಲದ ಪರಿಸರ ಹೊಸ ಬದುಕು ಸ್ವಾವಂಬಿಯಾದ ಜೀವನ ನೆಲೆಗೊಳ್ಳುತ್ತದೆಯೆಂಬ ಭಾವನೆಯನ್ನು ಕಟ್ಟಿಕೊಂಡು ಬಂದವಳು. ಬಾಲ್ಯದ ಗೆಳೆಯ ಆಶುಗೆ ಕುರುಕ್ಷೇತ್ರದ ಊರಿನಲ್ಲಿ ನಡೆದುಹೋದ ಕತೆಯನ್ನೆಲ್ಲಾ ತುಷಾರ್‌ನೊಂದಿಗೆ ಕಳೆದ ದಿನಗಳು, ಕಾಲೇಜಿನ ಕ್ಯಾಂಪಸ್ಸಿನ ತುಂಬಾ ನೂರಾರು ಕನಸುಗಳನ್ನೊತ್ತುಕೊಂಡು ಸಾಗಿದ್ದು ಪಕ್ಕದಲ್ಲಿ ಬಿರ್ಲಾ ಮಂದಿರ, ಕೆಳಭಾಗದಲ್ಲಿ ಸರೋವರದ ಸುತ್ತಮುತ್ತ ಶೀಲ, ತುಷಾರನೊಂದಿಗೆ ಕಳೆದ ಕ್ಷಣಗಳು, ಒಬ್ಬ ಒಳ್ಳೆಯ ಸ್ನೇಹಿತನಾಗಿ ಶೀಲ ಆತನೊಂದಿಗೆ ವರ್ತಿಸಿದ ರೀತಿ, ಒಬ್ಬ ಮಹಿಳೆ ಶೈಕ್ಷಣಿಕ ವಿಚಾರ ಧಾರೆಯೊಂದಿಗೆ ಜೀವನವನ್ನು ವೈಚಾರಿಕ ಪ್ರಜ್ಞೆಯೊಂದಿಗೆ ಕಟ್ಟಿಕೊಂಡ ರೀತಿ ಅನನ್ಯವಾಗಿರುವಂತಹದ್ದು. ಒಂದು ಸಂಜೆ ಜಾರುವ ಮಟ್ಟಿನಲ್ಲಿ ರಾತ್ರಿ ದಟ್ಟವಾಗತೊಡಗಿದ್ದ ಮಣದಲ್ಲಿ ಸರೋವರದ ಕಲ್ಲು ಬೆಂಚಿನ ಮೇಲೆ ಕೂತು ಹರಟುತ್ತಿರಬೇಕಾದರೆ ಮೂವರು ದಾಂಡಿಗರು ಬಾಯಿಗೆ ಬಟ್ಟೆ ತುರುಕಿ ಕಂಬಕ್ಕೆ ಕಟ್ಟಿ ತನ್ನ ಮೇಲೆ ಅತ್ಯಾಚಾರವೆಸಗಿಸಬಿಡುತ್ತಾರೆ. ಆಕೆಯ ಮೈಮೇಲೆ ಮಾಸಲಾರದ ಗಾಯಗಳಾಗಿ ಬಿಡುತ್ತವೆ. ಶೀಲಳ ಈ ಕತೆ ಕೇಳಿದ ಆಶು ದಿಗ್ಭ್ರಮೆಗೊಳ್ಳುತ್ತಾಣೆ.

ಶೀಲ ಎಂಬ ಸ್ತ್ರೀ ಬದುಕಿನಲ್ಲಿ ನಡೆದು ಹೋಗುವ ಘಟನಾವಳಿಗಳು ಆಕೆಯ ಬದುಕಿನಲ್ಲಿ ಅನೇಕ ತಿರುವುಗಳನ್ನು ಪಡೆದುಕೊಳ್ಳುತ್ತವೆ. ಇಪ್ಪತ್ತನೇ ಶತಮಾನದ ಹೆಣ್ಣು ಶಿಕ್ಷಣವೆನ್ನುಬ ವೈಚಾರಿಕ ಪ್ರಜ್ಞೆಯ ತಳಹದಿಯ ಮೇಲೆ ಬದುಕನ್ನು ಸ್ವತಃ ಕಟ್ಟಕೊಳ್ಳುವ ಸಂದರ್ಭವನ್ನು ವಿವರಿಸುತ್ತಾ ಮಹೀಳೆ ಕೂಡ ತನ್ನ ನೆಲೆಯ ಹುಡುಕಾಟದಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಭಾಗವಹಿಸಿ ಸ್ಪರ್ಧಾತ್ಮಕವಾದಂತೆ ಬದುಕು ಕಟ್ಟಿಕೊಳ್ಳಬಹುದೆಂಬ ತಾತ್ವಿಕ ಆಶಯವನ್ನು ಕತೆ ಸಾರುತ್ತದೆ. ಕತೆಗಾರ್ತಿಯರು ಸಾಂಸ್ಕೃತಿಕ, ಕೌಟುಂಬಿಕ, ಆರ್ಥಿಕ, ಸಾಮಾಜಿಕ ವಲಯಗಳ ಕೆಲವು ಮೂಲಭೂತ ವಿಚಾರಗಳ ಮೇಲೆ ಕತೆಗಳನ್ನು ರಚಿಸಿ ಹೊಸ ವಿಚಾರ ಮತ್ತು ಎಚ್ಚರಗಳನ್ನು ಮೂಡಿಸಿದರು.

ಸ್ತ್ರೀ ಸ್ವಾತಂತ್ರ್ಯದ ಪ್ರತಿನಿಧಿಯಾಗಿ ಮಹಿಳೆ ಕೂಡ ಯಾರ ಹಂಗಿಲ್ಲದೆ ಒಂಟಿಯಾಗ ಬದುಕಿ ತೋರಿಸಬಹುದೆಂಬ ನಿಲುವು ಶಿಕ್ಷಣ, ಉದ್ಯೋಗದಿಂದ ಸಾಧಿಸಿ ತೋರಿಸುತ್ತಾಳೆಂಬ ಸಂದೇಶವನುಬಿ.ಟಿ. ಜಾಹ್ನವಿಯವರ 'ಕಳೆದುಕೊಂಡವಳು', 'ಹುಡುಕಾಟ' ಎರಡು ಕಥಾಸಂಕಲನಗಳನ್ನು ರಚಿಸಿದ್ದಾರೆ.

ಈ ಎಲ್ಲಾ ಕಥೆಗಳಲ್ಲಿ ಕಥೆಗಾರ್ತಿ ಗಂಡು-ಹೆಣ್ಣಿನ ಸಂಬಧವನ್ನು ಕುರಿತು ಯಾವುದೇ ಮಡಿ, ಮೈಲಿಗೆಯಿಲ್ಲದೆ ವ್ಯಕ್ತಪಡಿಸಿದ್ದಾರೆ. ಗಂಡು-ಹೆಣ್ಣಿನ ಕಾಮ, ಪ್ರೇಮ ಇದರಿಂದ ಒದಗುವ ಸಂಕಷ್ಟಗಳು, ಅಲ್ಲದೆ ಇಲ್ಲಿಯ ಕಥೆಗಳ ಹೆಣ್ಣುಗಳು ಯಾವುದೇ ಮಡಿ ಮೈಲಿಗೆಯಿಲ್ಲದೆ ತನಗೆ ಬೇಕಾದ ತನ್ನ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಮುಂದಾಗುತ್ತಾಳೆ. ಹೆಣ್ಣಿನ ಮನಸ್ಸಿನ ಅಂತರಾಳದ ಮಾತುಗಳು ಸುಪ್ತಬಯಕೆಗಳು, ಮೂಢನಂಬಿಕೆ, ಜಾತಿಪದ್ಧತಿ, ಬಾಲಕಾರ್ಮಿಕ ಪದ್ಧತಿ ಇತ್ಯಾದಿ ಅಂಶಗಳು ಕಥೆಯ ಅಲ್ಲದೆ ಹೆಣ್ಣು ಮಾನಸಿಕವಾಗಿ, ದೈಹಿಕವಾಗಿ ಪುರುಷನಿಂದ ಅನುಭವಿಸುವ ಸಂಕಷ್ಟಗಳು, ಲೈಂಗಿಕ ದೌರ್ಜನ್ಯ, ಅಲ್ಲದೇ ಮಾನವೀಯ ಸಂಬಂಧಗಳು, ಇತ್ಯಾದಿ ಅಂಶಗಳು ಕಥೆಯಾಗಿವೆ. ಇಲ್ಲಿನ ಸ್ತ್ರೀಪಾತ್ರಗಳು ದಿಟ್ಟತನದಿಂದ ಹೋರಾಡುವ ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳುವವರಾಗಿದ್ದಾರೆ. ಹೀಗೆ ಗಂಡು ಹೆಣ್ಣಿನ ಕಾಮಪ್ರೇಮವನ್ನು ಕುರಿತು ವ್ಯಕ್ತಿಗಳ ಮನಸ್ಸಿನ ತಲ್ಲಣಗಳನ್ನು ಕಥೆಗಾರ್ತಿ ಯಾವುದೇ ಸಂಕೋಚವಿಲ್ಲದೆ ತೆರೆದಿಟ್ಟು ಹೆಣ್ಣಿನ ಅಂತರಾಳದ ಮಾತುಗಳನ್ನು ವ್ಯಕ್ತಪಡಿಸಿದ್ದಾರೆ. 'ಕಳೆದುಕೊಂಡವಳು ಮತ್ತು ಇತರ ಕಥೆಗಳು' ಎಂಬ ಕಥಾಸಂಕಲನದಲ್ಲಿನ ಮೊದಲನೇ ಕಥೆಯಾದ ವಿಮುಖದಲ್ಲಿ ಗಂಡು ಹೆಣ್ಣಿನ ಸಂಬಂಧವನ್ನು ಕುರಿತು ಹೇಳುವ ಸಂಕೀರ್ಣ ಕಥೆಯಾಗಿದೆ. ಈ ಕಥೆಯ ನಾಯಕಿ ಮೈತ್ರ ತನ್ನ ಪ್ರಿಯಕರನ ಸ್ನೇಹಿತನಿಂದ ಅತ್ಯಾಚಾರಕ್ಕೊಳಗಾಗಿದ್ದಾಳೆ. ಈ ಸಂದರ್ಭದಲ್ಲಿ ಎಷ್ಟೇ ಪ್ರಯತ್ನಿಸಿದರೂ ಕಾಮುಕ ವ್ಯಕ್ತಿಯಿಂದ ತಪ್ಪಿಸಿಕೊಳ್ಳಲಾರದೆ, ತನ್ನನ್ನು ದೈಹಿಕವಾಗಿ ತನ್ನ ಮೇಲೆ ಮಾಡುತ್ತಿರುವ ಹಿಂಸೆಯನ್ನು ತಾಳಲಾರದೆ ತನ್ನನ್ನು ಅರ್ಪಿಸಿಕೊಳ್ಳುತ್ತಾಳೆ. ಮೈತ್ರಳ ಈ ರೀತಿಯ ಒಪ್ಪಿಕೊಳ್ಳುವಿಕೆ ದಿನಕ್ಕೊಂದು ಹೆಣ್ಣನ್ನು ಬದಲಿಸುವ ಕಾಮುಕ ವ್ಯಕ್ತಿಗೆ ತನ್ನ ಕ್ರುರತನದಿಂದ ವಿಮುಖನನಾಗಿ ಹೊಸ ವ್ಯಕ್ತಿತ್ವವನ್ನು ಪಡೆದುಕೊಂಡು ಮೈತ್ರೆಯಳನ್ನು ಮದುವೆಯಾಗುವುದರ ಮೂಲಕ ಮಾನವೀಯತೆಯನ್ನು ತೋರುತ್ತಾನೆ. ಇಲ್ಲಿ ಮೈತ್ರಿ ತನ್ನ ಪ್ರಿಯಕರನಿಂದ ಪಡೆಯದ ಸುಖವನ್ನು ಈ ವ್ಯಕ್ತಿಯಿಂದ ಪಡೆಯುತ್ತಾಳೆ. ಇಲ್ಲಿ ತಾನು ಒಪ್ಪಿಕೊಂಡಿರುವುದು ಅಪರಾಧ ಎಂಬ ಪಾಪ ಪ್ರಜ್ಞೆಯಿಲ್ಲ ಕಾರಣ ತನ್ನ ಪ್ರಿಯಕರನ ಮೋಸ ಹಾಗೂ ಭರತನೊಂದಿಗೆ ಆ ಸಂಬಂಧ ಆಕೆಯಲ್ಲಿ ಹೊಸತನವನ್ನು ತಂದುಕೊಟ್ಟಿದೆ. ತನ್ನ ಸುಪ್ತಬಯಕೆಗಳು, ತಣಿಯದ ಆಸೆ, ಆಕಾಂಕ್ಷೆಗಳು ಕಾಮುಕವ್ಯಕ್ತಿಯಿಂದ ಪಡೆದು ಸಂತೃಪ್ತಳಾಗಿದ್ದಾಳೆ. ಹೀಗೆ ಹೆಣ್ಣಿನ ಪ್ರೇಮ, ವಾತ್ಸಲ್ಯ ಕೌರ್ಯ ವ್ಯಕ್ತಿಯನ್ನು ಬದಲಿಸುವ ಸಾಮರ್ಥ್ಯವನ್ನು ಕಾಣಬಹುದಾಗಿದೆ. 'ಕಳ್ಳಿಬಳ್ಳಿ' ಕಥೆಯಲ್ಲಿ ವ್ಯಕ್ತಿಗಳ ಗುಣ ಸ್ವಭಾವಗಳನ್ನು ಕುರಿತು ಹೇಳುತ್ತದೆ. ಸ್ವಿಕರ ರಕ್ತ ಸಂಬಂಧಗಳಲ್ಲಿ ನಡೆಯುವ ಅಸ್ಪೃಶ್ಯತಾ ಭಾವನೆ, ಅಧಿಕಾರದ ಕ್ರೌರ್ಯ, ಓದಿಗಾಗಿ ಹಂಬಲಿಸುವ ಬಾಲಕನೊಬ್ಬನ ಉತ್ಕಟ ಆಕಾಂಕ್ಷೆ, ಆದರೆ ಅದನ್ನು ಈಡೇರಿಸಿಕೊಳ್ಳಲಾರದ ಅಸಹಾಯಕತೆ ಬಡತನ, ಸಂಬಂಧಗಳಲ್ಲಿನ ಕ್ರೌರ್ಯತೆ ವ್ಯಕ್ತವಾಗಿದೆ.

'ತಾಯ್ತನ' ಕಥೆಯಲ್ಲಿ ಹೆಣ್ಣು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅನುಭವಿಸುವ ಅಪಮಾನ ಹಿಂಸೆಗಳ ಸಂಕೀರ್ಣ ಕಥೆಯಾಗಿದೆ. ಈ ಕಥೆಯ ಪೃಥ್ವಿ ಪಾತ್ರದ ಮೂಲಕ ನಿರೂಪಣೆಗೊಳ್ಳುತ್ತದೆ. ಇಲ್ಲಿ ಪೃಥ್ವಿಗೆ ತಂದೆಯ ಮೇಲೆ ಅಪಾರ ದ್ವೇಷವಿದೆ. ಅಪಘಾತಕ್ಕಿಡಾದರೂ ನೋವು ಬದುಕಿನಲ್ಲಿ ಹೊರಾಡುತ್ತಿದ್ದರೂ ಅನುಕಂಪವಿಲ್ಲ ಕಾರಣ ತನ್ನ ತಾಯಿಗೆ ಮಾಡಿರುವ ಹಿಂಸೆ, ಅಪಮಾನ, ನೋವು ಪುರುಷರನ್ನು ದ್ವೇಷಿಸುವ ಮಟ್ಟಕ್ಕೆ ಅಲ್ಲದೆ ತಮ್ಮನ್ನು ಸಹ ತಾಯಿಗೆ ತಾಯಿ ಎಂಬ ಮಮಕಾರವಿಲ್ಲದೆ "ಅಯ್ಯೋ ಯಾರೂ ಮಾಡದೆ ಇರೋ ಘನಕಾರ್ಯವಲ್ಲ ಪಡೆಯೋದು ಪ್ರತಿಯೊಂದು ಹಂಡೇವು ಪಕ್ಕದಲ್ಲಿ ಮಗನ ದುಡ್ಡಿನ ಸೂರೆ ಕಂಡು ತಮ್ಮ ಈ ಕೃತ್ಯಕ್ಕೆ ಪಶ್ಚಾತಾಪಗೊಂಡು ಹೀಗೆ ಇಲ್ಲಿ ಜಾತಿಪದ್ಧತಿ, ಮಡಿಮೈಲಿಗೆ ಹಾಗೂ ಸಂಪ್ರದಾಯತೆ ಆಧುನಿಕತೆಯ ಸಂಘರ್ಷವನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

ಜಾಹ್ನವಿಯವರ ಕತೆಗಳಲ್ಲಿ ಹೆಣ್ಣಿನ ಜೀವನದ ನೋವು, ಸಂಕಷ್ಟಗಳು, ಅಪಮಾನ, ಹಿಂಸೆಗಳನ್ನು ಆ ಮೂಲಕ ಸ್ವತಂತ್ರವಾಗಿ ಬದುಕುವ ಹೆಣ್ಣಿನ ಚಿತ್ರಣವನ್ನು ಈ ಕಥಾ ಸಂಕಲನದಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಈ ಎಲ್ಲಾ ಕಥೆಗಳಲ್ಲಿ ಪುರುಷರು ಹೆಣ್ಣಿನ ಮೇಲೆ ನಡೆಸುವ ಶೋಷಣೆಯನ್ನು ವಯಸ್ಸಿನ ಅಂತರದಲ್ಲಿ ಗಂಡು ಹೆಣ್ಣಿನ ಬಯಕೆಗಳನ್ನು ತಣಿಸಲು ಅಸಹಾಯಕನಾದಾಗ ಲೈಂಗಿಕ ತೃಪ್ತಿಗಾಗಿ ಅನೈತಿಕ ಸಂಬಂಧವನ್ನು ಬಯಸುವ ಅದನ್ನು ಅಪರಾಧ ಎಂದು ತಿಳಿಯದೆ ಅದಕ್ಕೆ ಮೂಲ ಕಾರಣ ಪುರುಷರೇ ಎಂದು ಇಂತಹ ಲೈಂಗಿಕತೆಯನ್ನು ಮುಕ್ತವಾಗಿ ಕತೆಗಾರ್ತಿ ತೆರೆದಿಟ್ಟು ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ನಿಲ್ಲಬಲ್ಲ ಕಥೆಗಾರ್ತಿಯಾಗಿದ್ದಾರೆ. ಹೀಗೆ ಇಲ್ಲಿನ ಬಹುಪಾಲು ಕಥೆಗಳಲ್ಲಿ ಗ್ರಾಮೀಣ ನಗರ ಭಾಷೆಯನ್ನು ಬಳಲಾಗಿದೆ. ಇಲ್ಲಿನ ಬಹುಪಾಲು ಕತೆಗಳಲ್ಲಿ ಸಾಂಪ್ರದಾಯಿಕ ಆಧುನಿಕತೆ ಮುಖಾಮುಖಿಯಾಗಿಸಿದೆ.

ಕನ್ನಡ ಕಥಾ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದವರಲ್ಲಿ ಡಾ. ಎಂ.ಎಸ್.ವೇದಾ ಪ್ರಮುಖರಾಗಿದ್ದಾರೆ. ಎವರು 'ಪ್ರೀತಿ ಮತ್ತು ಸಾವು', 'ಪಾಲು' ಎಂಬ ಕಥಾ ಸಂಕಲನಗಳನ್ನು ರಚಿಸಿದ್ದಾರೆ. ಈ ಎಲ್ಲಾ ಕಥೆಗಳಲ್ಲಿ ಮೈಸೂರು ಗ್ರಾಮೀಣ ನಗರ ಪರಿಸರದ ಪ್ರಭಾವವಿದೆ. ಸಮಕಾಲೀನ ಸಮಾಜದಲ್ಲಿ ಕಂಡುಬರುವಂತಹ ಪ್ರೀತಿ, ಪ್ರೇಮ, ಮೋಸ ವಂಚನೆ, ಸುಳ್ಳು,ಸತ್ಯ, ಅನ್ಯಾಯ ಅನೀತಿ ಧರ್ಮ ನಿಯಮಗಳು, ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳು ಇತ್ಯಾದಿ ಅಂಶಗಳು ಕಥೆಯ ವಸ್ತುಗಳಾಗಿವೆ. ಭಾರತೀಯ ಸಮಾಜದಲ್ಲಿ ಪುರುಷ ಪ್ರಧಾನ ಸಮಾಜ ಹೆಣ್ಣಿನ ಮೇಲೆ ನಡೆಯುವ ಶೋಷಣೆಯನ್ನು ಹಾಗೂ ಅದಕ್ಕೆ ಪರಿಹಾರವೆಂಬಂತೆ ಆ ಹೆಣ್ಣು ಪ್ರತಿಭಟಿಸುವ ಮನೋಭಾವವನ್ನು ಈ ಕಥೆಗಳಲ್ಲಿ ಹೆಣ್ಣಿನ ದಿಟ್ಟತನವನ್ನು ಕಾಣಬಹುದು. ಈ ಹಿನ್ನಲೆಯಲ್ಲಿ ಕತೆಗಾರ್ತಿಯ ಕಥೆಗಳನ್ನು ವಸ್ತು ಧೋರಣೆಯ ದೃಷ್ಟಿಯಿಂದ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

'ಅನುಕ್ತ' ಕಥೆಯ ನಾಯಕಿ ಗಂಡನ ಅನೈತಿಕ ಸಂಬಂಧ ತಿಳಿದು ತನ್ನ ಗಂಡನಿಂದ ಬಿಡುಗಡೆಗೊಂಡು ತನಗಿಷ್ಟವಾದ ಗಂಡನ್ನು ಆಯ್ದುಕೊಳ್ಳುವುದರ ಮೂಲಕ ಸಮಾಜದ ಕಟ್ಟುಪಾಡುಗಳನ್ನು ಮೀರಿ ಸ್ವತಂತ್ರವಾಗಿ ಬದುಕುವ ಗಟ್ಟಿಗಿತ್ತಿಯಾಗಿ ಕಂಡುಬಂದರೆ, 'ಉರಿದವರ' ಕಥೆಯಲ್ಲಿ ಬರುವ ಅನುರಾಧ ಕಾಮುಕ ವ್ಯಕ್ತಿಗಳಿಗೆ ಬಲಿಪಶುವಾಗಿ ಮಾನಸಿಕವಾಗಿ ಹಿಂಸೆಗೊಳ್ಳುವುದುರ ಮೂಲಕ ದುರಂತ ನಾಯಕೀಯವಾಗಿ ಕಂಡುಬರುತ್ತಾರೆ. 'ಒಂಟಿಮೋಡಗಳು' ಕಥೆಯಲ್ಲಿ ಬರುವ ನಾಯಕಿ ಮೂರು ಮಕ್ಕಳ ತಾಯಿಯಾದ ನಂತರ ತನ್ನ ಗಂಡನಿಂದ ದೂರವಾಗಿ ಹಲವು ವರ್ಷಗಳ ನಂತರ ಪಶ್ಚಾತಾಪಗೊಂಡು ತನ್ನ ಕುಟುಂಬಕ್ಕೆ ಹಿಂದುರಿಗಿದ್ದು ವ್ಯಕ್ತಿಯಲ್ಲಿ ಕಾಮ, ಪ್ರೇಮ ಎಂತಹ ಅನಾಹುತಕ್ಕೆ ಕಾರಣವಾಗಿ ಜೀವವನ್ನು ದುರುಂತವಾಗಿಸುತ್ತದೆ ಎಂಬುದನ್ನು ಕಾಣಬಹುದು. ಇಲ್ಲಿ ಗಂಡ-ಹೆಂಡತಿ, ತಾಯಿ-ಮಕ್ಕಳ, ತಂದೆ-ಮಕ್ಕಳ ಸಂಬಂಧಗಳ ಸೂಕ್ಷ್ಮತೆಯನ್ನು ಕಾಣಬಹುದಾಗಿದೆ.

ವೇದಾ ಅವರ 'ಪಾಲು' ಎಂಬ ಕತೆಯನ್ನು ರಚಿಸಿದ್ದಾರೆ. ಇವರ ಎಲ್ಲಾ ಕತೆಗಳು ಗ್ರಾಮೀಣ ಹಾಗೂ ನಗರ ಸಂಸ್ಕೃತಿಯನ್ನು ಒಳಗೊಂಡಿದ್ದು ಇಲ್ಲಿನ ಬಹುಪಾಲು ಕಥೆಗಳು ಗ್ರಾಮೀಣ ಬದುಕನ್ನು ಕುರಿತು ಹೇಳುತ್ತದೆ. ಈ ಕಥೆಯ ನಾಯಕಿ ತಾಯವ್ವ ದುಡಿಯುವ ದಿಟ್ಟ ಮಹೆಳೆಯಾಗಿದ್ದಾಳೆ. ಹದಿಹರೆಯದ ವಯಸ್ಸಿನಲ್ಲಿ ವಿಧವೆಯಾಗಿ, ಬದುಕುವ ಛಲಬಿಡದೆ ಮಕ್ಕಳನ್ನು ಸಾಕಿ ಸಲುಹಿದಳು ಆದರೆ ಈ ಮಕ್ಕಳೆ ತನ್ನನ್ನು ತಿರಸ್ಕರಿಸುತ್ತಾಳೆ ಎಂದು ಅವಳು ಬಾವಿಸಿರಲಿಲ್ಲ. ತನ್ನ ಮಕ್ಕಳಿಗೆ ಮದುವೆ ಮಾಡಿ ಸೊಸೆಯರನ್ನು ಮನೆ ತುಂಬಿಸಿಕೊಂಡಿದ್ದ ಗಳಿಗೆಯಲ್ಲಿ ತಾಯವ್ವೆ ಎಲ್ಲಾರಿಂಗಲೂ ಅಲಮಾನ, ಹಿಂಸೆ ಅನುಭವಿಸಿಬೇಕಾಯಿತು. ಅಲ್ಲದೆ ತಾನು ಕಷ್ಟ ಪಟ್ಟು ದುಡಿದು ಬೆಳೆಸಿದ ಹಟ್ಟಿಯು ಪಾಲಾಗುವುದನ್ನು ಅವಳು ಸಹಿದಾದಳು. ವಯಸ್ಸಿನ ಅಂತರದಿಂದ ಅತ್ತೆ ಸೊಸೆಯರ ಜಗಳದಲ್ಲಿ ತಾಯವ್ವನಿಗೆ ಸೋಲಾಗುವುದೇ ಸಹಜವೆಂಬಂತೆ.

ಎಂ.ಎಸ್ ವೇದಾ ಅವರು ತಮ್ಮ ಈ ಎರಡು ಕಥಾ ಸಂಕಲನದಲ್ಲಿ ಗ್ರಾಮೀಣ ಹಾಗೂ ನಗರ ಜನಜೀವನವನ್ನು ಕಾಣಬಹುದಾಗಿದೆ. ಈ ಎಲ್ಲಾ ಕತೆಗಳಲ್ಲಿ ಮೈಸೂರು ಗ್ರಾಮೀಣ ಭಾಷೆಯನ್ನು ಕಾಣಬಹುದಾಗಿದೆ. ಇಲ್ಲಿ ಕತೆಗಾರ್ತಿ ನಗರದ ಮಧ್ಯಮ ವರ್ಗದ ವಿದ್ಯಾವಂತ ತರುಣ ತರುಣಿಯರ ನಡುವಿನ ಪ್ರೀತಿ, ಪ್ರೇಮ, ದ್ವೇಷ, ನೋವು ಕತೆಗಳಲ್ಲಿ ವಿವಿಧ ಪಾತ್ರಗಳ ಮೂಲಕ ಕಾಣಿಸಿದ್ದಾರೆ. ಕತೆಗಾರ್ತಿಗೆ ನಗರ ಪ್ರದೇಶಕ್ಕಿಂತ ಗ್ರಾಮೀಣ ಹಿನ್ನಲೆಯಲ್ಲಿ ರಚಿಸಿದ ಕತೆಗಳು ಹೆಚ್ಚು ಪರಿಣಾಮಕಾರಿಯಾಗಿವೆ. ಇಲ್ಲಿ ಹಳ್ಳಿ ಗಾಡಿನ ಅಶಿಕ್ಷಿತ ಸಮಾಜದಲ್ಲಿ ಬದುಕುತ್ತಿರುವ ಹೆಣ್ಣಿನ ಮೇಲೆ ನಡೆಯುವ ಅತ್ಯಾಚಾರ, ಮೋಸ, ವ್ಯಭಿಚಾರ ಕಥೆಯ ವಸ್ತುವಾಗಿದೆ. ಗ್ರಾಮೀಣ ಓನ್ನಲೆಯಲ್ಲಿ ರಚಿತವಾದ ಕಥೆಗಳಲ್ಲಿ ಸಹಜವಾಗಿ ಕೆಳವರ್ಗದ ಬಡತನ ಜಾತಿ ಮತ್ತು ಸಂಪ್ರದಾಯದ ನಡುವಿನ ಸಂಬಂಧಗಳು, ಸಮಸ್ಯೆಯನ್ನು ಇಲ್ಲಿಯ ಕಥೆಗಳು ಶೋಧಿಸಿ ಅಂತ್ಯದಲ್ಲಿ ವ್ಯಕ್ತಿಯ

ಅಂತರಾಳದಲ್ಲಿರುವ ಮಾನವೀಯ ಅನುಕಂಪಗಳನ್ನು ಎತ್ತಿ ಹಿಡಿಯುತ್ತವೆ. ಹೀಗೆ ಇಲ್ಲಿನ ಪಾತ್ರಗಳು ಮಾನವೀಯತೆಯಿಂದ ತುಡಿಯುತ್ತವೆ. ಅಲ್ಲದೆ 'ಹೆಣ್ಣು ಅಬಲೆಯಲ್ಲ ಸಬಲೆ' ಎಂಬುದನ್ನು ತಾಯವ್ವ, ಸಾಂತವ್ವ ಚಿತ್ರ, ಮಂಜುಳಾ ಪಾತ್ರದ ಮೂಲಕ ಅನಾವರಣಗೊಳಿಸಲಾಗಿದೆ. ಹೀಗೆ ಪುರಾಣ ಕಾಲದಿಂದ ಪುರುಷರಿಂದ ಹೆಣ್ಣು ಶೋಷಣೆ, ದೌರ್ಜನ್ಯ ಅಪಮಾನ, ಅವಮಾನಗಳಿಗೆ ಒಳಗಾಗಿದ್ದು ನೊಂದಂತಹ ಜೀವಿಗಳಿಗೆ ಜೀವನೋತ್ಸಾಹವನ್ನು ನೀಡುವ ಮಾನವೀಯ ಸಂಬಂಧಗಳನ್ನೊಳಗೊಂಡ ಹೋಸ ಆಶಾಕಿರಣವನ್ನು ಮೂಡಿಸುವಂತೆ ಇಲ್ಲಿಯ ಕತೆಗಳಿವೆ. ಕತೆಗಳು ಹೆಣ್ಣು ಗಂಡುಗಳಲ್ಲಿರುವ ಕಾಮ, ಪ್ರೇಮ, ಬದುಕಿನಲ್ಲಿ ತರುವ ಸಂಕಷ್ಟಗಳನ್ನು ಅನಾವರಣಗೊಳಿಸುತ್ತದೆ ಅಲ್ಲದೆ ಇಲ್ಲಿಯ ಕಥಾ ನಾಯಕಿಯರು ಸಮಾಜದ ಕಟ್ಟು ಪಾಡುಗಳನ್ನು ಮೀರಿ ಸ್ವತಂತ್ರ್ಯವಾಗಿ ಬದುಕುತ್ತ ದಿಟ್ಟತನವನ್ನು ವೇದಾ ಅವರ ಕತೆಗಳಲ್ಲಿ ಕಾಣುತ್ತೇವೆ.

ಸಂಧ್ಯಾ ಹೂನಗುಂಟಿಯವ 'ತ್ರಿಶಂಕು' ಕಥೆಯಲ್ಲಿ ಸಂಪ್ರದಾಯಕತೆ ಆಧುನಿಕತೆಯನ್ನು ಮುಖಾಮುಖಿಯಾಗಿಸುವ ಸಂಕೀರ್ಣ ಚಿತ್ರಣವಿದೆ ವೈದಿಕ ಜಾತಿಯಲ್ಲಿ ಹುಟ್ಟಿದ ನಾಯಕಿ ತನ್ನ ಅಜ್ಜಿ ಅಮ್ಮ ನಿರ್ವಹಿಸುತ್ತಿದ್ದ ಮಡಿ, ಮೈಲಿಗೆ ಪೂಜೆ ಪುನಸ್ಕಾರದ ಬಗ್ಗೆ ಸದಾ ತಿರಸ್ಕಾರವಿದ್ದ ಮೈನೆರೆದಾಗ ಮೂರು ದಿವಸ ಹೊರಗೆ ಕೂರುವುದನ್ನು "ಈಗ್ಯಾರು ಹೊರಗೆ ಕೂಡ್ತಾರ' ಎಂದು ಪ್ರಶ್ನಿಸುತ್ತಾ ಬೇರೆ ಜಾತಿಯ ಹುಡುಗರಿಗೆ ತನ್ನ ಮನೆಯ ಪಡಸಾಲೆಯಲ್ಲಿ ವಿದ್ಯೆಕಲಿಸುವಾಗ ಅಜ್ಜಿ 'ಜಾತಿಯಿಲ್ಲದ ಪಾಲ್ಗೋಳಿಗಿ ಪಡಸಾಲ್ಯಗ ಕೂಡಿಸಿ ಟ್ಯೂಶನ್ ಹೇಳಬ್ಯಾಡ"[೭] ಎಂದು ತಿರಸ್ಕರಿಸಿದರೂ ಅದನ್ನು ಲೆಕ್ಕಿಸದೆ ಸಂಪ್ರದಾಯತೆಯನ್ನು ಕಟ್ಟುಪಾಡುಗಳನ್ನು ದಿಕ್ಕರಿಸುವುದರ ಮೂಲಕ ಇಂದಿನ ಸಂಪ್ರದಾಯಕತೆ ಮಡಿ ಮೈಲಿಗೆ ತನ್ನ ಅಸ್ಥಿತ್ವವನ್ನು ಕಳೆದುಕೊಳ್ಳುವುದನ್ನು ಕಾಣಬಹುದು ಅಲ್ಲದೆ ಪರಜಾತಿಯ ಹುಡುಗನನ್ನು ಮದುವೆಯಾಗುವುದರ ಮೂಲಕ ಸಾಂಪ್ರದಾಯಿಕ ಕಟ್ಟುಪಾಡುಗಳನ್ನು ಮೀರಿ ಸಮಾಜದ ಬಂಧನಗಳನ್ನು ಮೆಟ್ಟಿ ನಿಲ್ಲುವ ಆಧುನಿಕ ಮಹಿಳೆಯಾಗಿ ಕಂಡುಬಂದು ಅಂತರ ಜಾತಿ ವಿವಾಹ ಸರ್ವೆಸಾಮಾನ್ಯವಾಗಿ ಸಂಪ್ರದಾಯಕತೆ ತನ್ನ ಛಾಪವನ್ನು ಕಳೆದುಕೊಳ್ಳುತ್ತಿರುವುದನ್ನು ಕಾಣಬುಹುದು ಇದಕ್ಕೆ ಸ್ತ್ರೀ ವಿದ್ಯಾವಂತಳಾಗಿರುವುದು ಪ್ರಮುಖ ಕಾರಣವಾಗಿದೆ.

'ಹೊಸಪ್ರೇಮ' ಕಥೆಯಲ್ಲಿ ವಿದ್ಯಾವಂತ ಹುಡುಗ ನಿರುದ್ಯೋಗಿಯಾಗಿದ್ದು ಬದುಕನ್ನು ಎದಿರಿಸಲಾಗದೆ ಸನ್ಯಾಸತ್ವದ ಮುಖವಾಡ ಧರಿಸಿ ಬದುಕಿನಿಂದ ಪಲಾಯನಗೊಳ್ಳುವ ಪರಿಯನ್ನು ಹಾಗೂ ಆ ವೈರಾಗ್ಯ ಹಿಂದೆ ತನ್ನೆಲ್ಲ ಕಾಮ, ಪ್ರೇಮತೆಯನ್ನು ಬಲವಂತವಾಗಿ ತ್ಯಾಗ ಮಾಡಿದ್ದರೆ ಆ ಹಸಿ ಬಯಕೆಗಳು ಆರದೆ ತನ್ನ ಸನ್ಯಾಸತ್ವದ ಮುಖವಾಡದಿಂದ ಪಶ್ಚಾತಾಪಗೊಂಡಿದ್ದಾನೆ. ಆದರೆ ಈ ಮುಖವಾಡಕ್ಕೆ ಸಮಾಜವೇ ಕಾರಣವಾಗಿದೆ ಎಂದು ವ್ಯಕ್ತಿಯ ವಿಭಿನ್ನ ಮುಖಗಳನ್ನು ಕಾಣಬಹುದಾಗಿದೆ. ಹೀಗೆ ವ್ಯಕ್ತಿಯ ಮುಖವಾಡದ ಹಿಂದಿರುವ ಬದುಕಿನ ವಾಸ್ತವ ಚಿತ್ರಣವನ್ನು

ಕಥೆ ಅನಾವರಣಗೊಳಿಸುತ್ತದೆ. 'ಖರೇವಂದ್ರ ತಪ್ಪು' ಕಥೆಯಲ್ಲಿ ನಾಯಕಿ ವೇದಾಬಾಯಿ ಪರಿಸಥಿಯ ಕೈಗೊಂಬೆಯಾಗಿ ಹಿರಿಯರು ಇಲ್ಲದಾಗ ಬೇರೆ ದಾರಿಯಿಲ್ಲದೆ ದೇವಿ ಗುಡಿಗೆ ಹೊಕ್ಕು ದೇವಿಯನ್ನೇ ಶೃಂಗರಿಸಿ ಪೂಜೆ ಪುನಸ್ಕಾರ ಮಾಡಿದ್ದು ಅಪರಾಧವಾಗಿ ಪಂಚಾಯತಿ ಸೇರಿಸಿ ಶಿಕ್ಷೆ ವಿಧಿಸುವಲ್ಲಿ ತೀರ್ಮಾನಿಸಿದ ಪುರುಷ ಪ್ರಧಾನ ವ್ಯವಸ್ಥೆಯ ಸ್ವಾರ್ಥತನವನ್ನು ಕಾಣಬಹುದು ಆದರೆ ಅಲ್ಲೆ ನೆರೆದಿದ್ದ ವೆಂಕತ್ತಿ "ಹೌದ್ರಪ್ಪ ವೇದಾಬಾಯಿನು ಒಬ್ಬ ಹೆಂಗಸು, ಭಗವತಿ ತಾಯಿನು ಒಬ್ಬ ಹೆಂಗಸು, ಹೆಂಗಸು ಹೆಂಗಸ್ರಿಗೆ ಸೀರೆ ಉಡಿಸಿದ್ರ, ಅಲಂಕಾರ ಮಾಡಿದ್ರ ಏನು ತಪ್ಪು ಕಾಣಿಸ್ತು ನಿಮಗೆ..."[೮] ಪ್ರಶ್ನಿಸುವುದರ ಮೂಲಕ ಶಿಕ್ಷೆಯಿಂದ ವಿಮುಕ್ತಗೊಳಿಸಿ ದೇವಿಗೆ ಪೂಜೆ ಸಲ್ಲಿಸುವಲ್ಲಿ ಪುರುಷರಷ್ಟೇ ಸಮಾನತೆಯನ್ನು ಹೊಂದಿರುತ್ತಾರೆ. ಎಂದು ತನ್ನ ಹಕ್ಕನ್ನು ಪಡೆದುಕೊಳ್ಳುವ ದಿಟ್ಟತನ ಮಹಿಳೆಯಾಗಿ ಕಂಡುಬುರುತ್ತಾರೆ. ಹೀಗೆ ಪರುಷರು ಹೆಣ್ಣನ್ನು ಎಲ್ಲಾ ಅವಕಾಶಗಳಿಂದ ವಂಚಿತರನ್ನಾಗಿ ಮಾಡಿ ಶೋಷಇಸುವ ಪರಿಯನ್ನು ಆದರೆ ಇಂದಿನ ಆಧುನಿಕತೆಯಲ್ಲಿ ಹೆಣ್ಣು ಅದನ್ನು ಪ್ರಶ್ನಿಸುವ ತನ್ನ ಹಕ್ಕನ್ನು ಪಡೆದುಕೊಳ್ಳುವ ದಿಟ್ಟ ಮಹಿಳೆಯಾಗಿದ್ದಾಳೆ ಎಂಬುದನ್ನು ಕಾಣಬಹುದಾಗಿದೆ.

ಇವರ ಎಲ್ಲಾ ಕಥೆಗಳಲ್ಲಿ ಬರಗಾಲ, ಜಮೀನ್ದಾರರ ದೌರ್ಜನ್ಯ, ಜಾತೀಯತೆ, ಏಡ್ಸ್‌ರೋಗ, ಜನರ ಮೋಸ, ವಂಚನೆಯನ್ನು ಕಥೆಯ ವಸ್ತುವಾಗಿರಿಸಿದ್ದಾರೆ. ಅಲ್ಲದೆ ಬದುಕನ್ನು ಎದುರಿಸಲಾರದೆ ಮುಖವಾಡ ಧರಿಸುವ ಸನ್ಯಾಸತ್ವದ ಹಿಂದಿನ ಬದುಕಿನ ಕ್ರೂರತೆಯನ್ನು ತಿಳಿಸುವ 'ಹೊಸಪ್ರೇಮ' ಕಥೆಯು ನಿರುದ್ಯೋಗ, ಬಡತನ ಅಧಿಕಾರದ ಕ್ರೌರ್ಯವನ್ನು ಅನಾವರಣಗೊಳಿಸುತ್ತವೆ. ಅಲ್ಲದೆ ಅಂತರಜಾತಿ ವಿವಾಹ, ಮಡಿಮೈಲಿಗೆ ಸಂಪ್ರದಾಯಕತೆಯನ್ನು ತೊಡೆದು ಹಾಕುಲ್ಲಿ ಸ್ತ್ರೀ ವಿದ್ಯಾವಂತಳಾಗಿದ್ದು ಆಧುನಿಕತೆಯನ್ನು ಕಾಣಬಹುದಾಗಿದೆ.

ಸುಮಂಗಲಾ ಅವರು 'ಜುಮುರುಮಳೆ', 'ಕಾಲಿಟ್ಟಲ್ಲಿ ಕಾಲುದಾರಿ', 'ಸೀತಾಳೆ ಹೂ ಮತ್ತು ಇತರ ಕತೆಗಳು' ಎಂಬ ಕಥಾಸಂಕಲನಗಳನ್ನು ರಚಿಸಿದ್ದಾರೆ. ಈ ಎಲ್ಲಾ ಕಥೆಗಳಲ್ಲಿ ಹೆಣ್ಣಿನ ವಿವಿಧ ತುಮಲಗಳನ್ನು ವಿಭಿನ್ನ ರೀತಿಯಲ್ಲಿ ಸೆರೆಹಿಡಿದಿದ್ದಾರೆ. ಈ ಎಲ್ಲಾ ಕತೆಗಳಲ್ಲಿ ಸ್ಥಾಯಿಭಾವ ವಿಷಾದ ಇಲ್ಲಿ ಮನುಷ್ಯ ಸಂಬಂಧಗಳ ಸಂಕೀರ್ಣ ಚಿತ್ರಣವಿದೆ. ಅಲ್ಲದೆ ಕೌಟುಂಬಿಕ, ಸಾಮಾಜಿಕ ವ್ಯಕ್ತಿಗತ ನೆಲೆಯಲ್ಲಿ ಮಾನವೀಯತೆಯನ್ನು ಕಾಣಿಸುವಂತೆ ಕೌಟುಂಬಿಕ ಹಾಗೂ ಹೊರ ಸಂಬಂಧಗಳಲ್ಲಿ ಪ್ರೀತಿಯನ್ನು ಕಾಣಬಹುದು ಸುಮಂಗಲಾ ಕಥೆಗಲಲ್ಲಿ ನವ್ಯದ ಪ್ರಭಾವವನ್ನು ಕಾಣಬಹುದಾಗಿದೆ. ವ್ಯಕ್ತಿಯ ಅಂತರಂಗದ ಶೋಧನೆ ಇಲ್ಲಿಯ ಬಹುಪಾಲು ಕಥೆಗಲಲ್ಲಿ ಕಂಡುಬರುತ್ತದೆ. ನವ್ಯದ ಹಿನ್ನಲೆಯಲ್ಲಿ ರಚಿತವಾದ ಕಥೆ 'ಪ್ರಜತ್ತು ಡೈರಿ ಬರೆಯಲಿಲ್ಲ' ಒಂದು ಸಂಕೀರ್ಣ ಕತೆಯಾಗಿದೆ. ಈ ಕಥೆಯಲ್ಲಿ ಪ್ರಜಕ್ತಾಳ ತನ್ನ ನೆನಪುಗಳನ್ನು ಲೈಟು ಕಂಬದ ಸುತ್ತ ನಡೆದ ಘಟನೆಗಳನ್ನು ನೆನೆಯುವುದರ ಮೂಲಕ ಕಥೆ ತನ್ನ ಹಂದರವನ್ನು ಬಿಚ್ಚಿಕೊಳ್ಳುತ್ತದೆ ಈ ಕಥೆಯ ನಾಯಕಿಗೆ

ಡೈರಿ ಬರೆಯುಲು ಸಾಧ್ಯವಾಗುತ್ತಿಲ್ಲ. ಕಾರಣ ತನ್ನ ಮೊದಲ ಪ್ರೇಮವನ್ನು ಡೈರಿಯಲ್ಲಿ ಬರೆದ ವ್ಯಕ್ತಪಡಿಸುವ ಮುಚೆಯೆ ಪ್ರಿಯಕರನಿಗೆ ತಿಳಿದು ಅವಳ ಉಡುಗೊರೆಯನ್ನು ನಿರಾಕರಿಸಿದ್ದು ಅವಳ ಪ್ರೇಮ ನಿರಾಕರಿಸಲ್ಪಟ್ಟಿತು. ಹೀಗೆ ಪ್ರೀತಿ ಪ್ರೇಮ ಬದುಕಿನಲ್ಲಿ ಆಕರ್ಷಣೀಯವಾಗಿ ಕಂಡುಬಂದರೂ ಅದು ನೀಡುವ ಸಂಕಷ್ಟಗಳು ಅಪಾರ ಹೀಗೆ ಈ ಪ್ರೇಮ ವಿಷಾದ ಛಾಯೆಯನ್ನು ಮೂಡಿಸುತ್ತದೆ. ಅಲ್ಲದೆ ಇಲ್ಲಿ ಅಸಹಾಯಕ ನಿರ್ಗತಿ ಚಿಂದಿ ಆಯುವ ಹೆಣ್ಣುಗಳ ಬದುಕಿನ ಬೀಕರತೆಯನ್ನು ತೋರುತ್ತದೆ.

'ಫಾತೀಮಾಗೆ ಮಳೆಯೆಂದರೆ ಇಷ್ಟ' ಕತೆಯಲ್ಲಿ ಹೆಣ್ಣಿನ ಗುಣ ಸ್ವಭಾವಗಳ ಸಂಕೀರ್ಣ ಚಿತ್ರಣವಿದೆ. ಈ ಕಥೆಯ ನಾಯಕಿ ಪಾತೀಮಾಳ ಪಾತ್ರದ ಮೂಲಕ ನಿರೂಪಣೆಗೊಳ್ಳುತ್ತದೆ. ಇಲ್ಲಿ ಪಾತೀಮಾ ಕೆಳವರ್ಗದ ಮಹಿಳೆಯಾಗಿದ್ದು, ವಯಸ್ಸಾದ ಖಾಯಿಲೆಯಿಂದ ನರಳುವ ಗಂಡನೊಂದಿಗೆ ಕುಟುಂಬದ ಜವಾಬ್ದಾರಿ ಹೊತ್ತು ನಾಲ್ಕು ಮನೆ ಕಸಮುಸರಿ ಮಾಡುವುದರ ಮೂಲಕ ಜೀವನ ಸಾಗಿಸುತ್ತಿದ್ದಳು. ತನ್ನ ಸ್ವಾಭಿಮಾನ ಗುಣಸ್ವಭಾಗಳಿಂದ ಮನೆ ಒಡೆಯರ ಪ್ರೀತಿಪಾತ್ರಳಾಗಿದ್ದು ತನ್ನ ಮಗಳ ಕಳ್ಳತನದ ಅಪರಾಧದಿಂದ ಅವಮಾನಿತಳಾಗಿದ್ದಳು. ಅಲ್ಲದೆ ಮನೆ ಒಡೆಯರು ಹೊಸಬಟ್ಟೆ, ಒಡವೆ ಹಾಕಿಕೊಂಡರೆ, ಗಂಡದಿರೊಡನೆ ಸಿನಿಮಾಗೆ ಹೊರಟರೆ ಸಹಜವಾಗಿ ಈ ಸುಖದಿಂದ ವಚಿಂತವಾದುದನ್ನು ನೆನೆದು ಸಹಜವಾದ ಅಸೂಹೆ ಮೂಡುತ್ತಿತ್ತು. ಆದರೆ ತಾನು ಕೆಲಸ ಮಾಡುವ ಮನೆಯ ಒಡೆಯ ಕ್ಯಾನ್ಸರ್‌ನಿಂದ ಬಳಲುತ್ತಿರುವಾಗ ಯೋಗಕ್ಷೇಮ ವಿಚಾರಿಸಿ ಸಾಂತ್ವನದ ಮಾತುಗಳನ್ನಾಡುತ್ತಾ ಸಾವಿನ ಅನಿವಾರ್ಯತೆಯನ್ನು ತಿಳಿಸುತ್ತಾ "ನಮ್ಮ ಮೂಗಿನ ನೇರಕ್ಕೆ ಎಲ್ಲ ಇರಬೇಕು ಅಂದ್ರ ಹೆಂಗಸಾಧ್ಯ ಆಗ್ತದ... ಎಷ್ಟು ಜನ ಮಾತಾಡಿದ್ರ ಕಡೀಕೆ ನಾವು ಒಬ್ಬರೇರೀ.... ಮತ್ಯಾರೂ ಜತಿಯಾಗಂಗಿಲ್ರೀ.. ನಮನಮಗ ಹಂಗ ಕಬೂತಿನ್ನಿಸಿತದ ಹಂಗ ಗಟ್ಟಿಯಾಕ್ಕೋತ ಹೋಗೋದರೀ.... ಜಿಂದಗೀ ದೊಡ್ಡವದರೀ ಅಣ್ಣಾರ"[೯] ಎಂದು ಹೇಳುವ ಹೆಣ್ಣಿನ ನೋವು, ಸಂಕಷ್ಟಗಳನ್ನು ಹೇಳುತ್ತಾ ಮೇಲು ಕೀಳು ಎನ್ನುವ ಭಾವವಿಲ್ಲದ ಅಪ್ಪಟ ಮನುಷತ್ವದ ಮಾನವೀಯ ಮೌಲ್ಯವನ್ನು ಕೆಳವರ್ಗದ ಮಹಿಳೆಯಲ್ಲಿ ಕಾಣಬಹುದಾಗಿದೆ. ಹೀಗೆ ಎಲ್ಲ ಬಡತನ, ಹೆಣ್ಣಿನ ಅಸಹಾಯಕತೆ ನೋವು, ಅಪಮಾನ, ಸಂಕಷ್ಟಗಳು ಆ ಮೂಲಕ ಬದುಕುವ ಛಲವನ್ನು ಬಿಡದ ಹೆಣ್ಣಿನ ದಿಟ್ಟತನವನ್ನು ಕಾಣಬಹುದಾಗಿದೆ. ಹೀಗೆ ಇಲ್ಲಿ ಕುಟುಂಬದ ಒಳಗೆ ಹಾಗೂ ಅದರಾಚೆ ಯಾವುದೇ ಭೇದಭಾವವಿಲ್ಲದೆ ವ್ಯಕ್ತಿಗಳಲ್ಲಿ ಕಾಣುವ ಪ್ರೀತಿ ಕಥೆಯ ಆಶಯವಾಗಿ ಮೂಡಿಬಂದಿದೆ.

ಇವರ ಕತೆಗಳಲ್ಲಿ ಉತ್ತರ ಕನ್ನಡ ಪರಿಸರದ ಪ್ರಭಾವವನ್ನು ಕಾಣಬಹುದಾಗಿದೆ. ಈ ಎಲ್ಲಾ ಕೆಳ ಮಧ್ಯಮವರ್ಗದ ಹೆಣ್ಣಿನ ಜನಜೀವನ ಸಂಕಷ್ಟಗಳು, ಅಪಮಾನ ಹಿಂಸೆಗಳು ಕಥೆಯಲ್ಲಿ ಮೂಡಿವೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ಶೋಷಣೆಯನ್ನು ತಿಳಿಸುತ್ತಾ

ಹೆಣ್ಣಿನ ಮನಸ್ಸಿನ ಅಂತರಾಳವನ್ನು ಅರಿಯುವಂತೆ ಪುರುಷರಿಗೆ ಯಾವುದೇ ದ್ವೇಷವಿಲ್ಲದೆ ತಿಳುವಳಿಕೆಯನ್ನು ಮೂಡಿಸುವ ಯತ್ನದಲ್ಲಿ ಈ ಕತೆಗಳಿವೆ. ಈ ಎಲ್ಲಾ ಕತೆಗಳು ಕೌಟುಂಬಿಕ, ಸಾಮಾಜಿಕ, ವ್ಯಕ್ತಿಗತ ನೆಲೆಯಲ್ಲಿಟ್ಟು ಮಾನವೀಯ ಮೌಲ್ಯವನ್ನು ಈ ಕಥೆಗಳಲ್ಲಿ ಕಾಣಬಹುದಾಗಿದೆ.

ಇತ್ತೀಚಿನ ಕತೆಗಾರ್ತಿಯರಲ್ಲಿ ರೇಖಾರಾಣಿ ಪ್ರಮುಖರಾಗಿದ್ದಾರೆ. 'ಅರ್ಥವಾಗದವರು' ಕಥೆಯಲ್ಲಿ ವ್ಯಕ್ತಿಗಳ ಮನಸ್ಸಿನ ಭಾವನೆಗಳನ್ನು ಕುರಿತು ಹೇಳುವ ಸಂಕೀರ್ಣ ಕಥೆಯಾಗಿದೆ. ಈ ಕಥೆಯು ಪತ್ರ ಮಾದರಿಯ ಮೂಲಕ ನಿರೂಪಣೆಗೊಳ್ಳುತ್ತದೆ. ಮನೋಹರ ಎಂಬ ವ್ಯಕ್ತಿಯು ವಿಚಾರವಾದಿಯಾಗಿದ್ದು. ಪ್ರೀತಿ, ಪ್ರೇಮಗಳಿಗೆ ಸ್ಥಾನವಿಲ್ಲದೆ ಸದಾ ಸ್ವತಂತ್ರ್ಯವಾಗಿರಬೇಕೆಂದು ಹಂಬಲಿಸುತ್ತಿದ್ದು ಈ ಸಂದರ್ಭದಲ್ಲಿ ವಸಂತಾ ಎಂಬ ಕತೆಗಾರ್ತಿಯ ಕತೆಗಳನ್ನು ಓದಿ ಆಕೆಯ ಸ್ನೇಹಕ್ಕಾಗಿ ಹಂಬಲಿಸಿ ಪರಸ್ಪರ ಪತ್ರಮಾದರಿಯ ಮೂಲಕ ಮೆಚ್ಚುಗೆ, ಅಭಿನಂದನೆ ನೀಡುತ್ತಾ ಕಷ್ಟಸುಖಗಳನ್ನು ಹಂಚಿಕೊಂಡು ಆತ್ಮೀಯರಾಗಿದ್ದರು. ಆದರೆ ಈ ಆತ್ಮೀಯತೆಯನ್ನು ಪ್ರೀತಿ ಎಂದು ತಿಳಿದ ವಸಂತಾ ಮದುವೆಯಾಗಲು ಇಚ್ಚಿಸಿದಾಗ ಪ್ರಿಯಕರನ ನಿರಾಕರಣೆ ಆಘಾತವಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಹೀಗೆ ಈ ಪ್ರೀತಿ ಪ್ರೇಮಗಳು ಅದರ ಆಳ ಅಗಲವನ್ನು ಅರಿತುಕೊಳ್ಳಲಾಗದೆ ವ್ಯಕ್ತಿಗಳ ಬದುಕಿನಲ್ಲಿ ಸಂಕಷ್ಟಗಳನ್ನು ತಂದುಕೊಡುತ್ತದೆ. ಅಂತ್ಯದಲ್ಲಿ ವಸಂತಾಳಿಗೆ ತನ್ನ ಕೃತ್ಯದ ಬಗ್ಗೆ ಪಶ್ಚಾತ್ತಾಪಗೊಂಡು ಮನೋಹರ ಬಯಸಿದಂತೆ ಆತ್ಮೀಯ ಸ್ನೇಹಿತರಾಗಿ ಉಳಿಯುವುದರ ಮೂಲಕ ಪ್ರೇಮಕ್ಕಿಂತ ಸ್ನೇಹ ಶಾಶ್ವತವಾದದ್ದು ಎಂಬುದನ್ನು ಕಾಣಬಹುದು. ಇಲ್ಲಿ ವ್ಯಕ್ತಿಯ ಒಂಟಿತನಕ್ಕೆ ಪರಿಸರ ದಟ್ಟ ಪ್ರಭಾವ ಬೀರುತ್ತದೆ. ಹೀಗಾಗಿ ಮದುವೆ ಎಂಬ ವಿಷಯದ ಬಗ್ಗೆ ತಿರಸ್ಕಾರ ಕಂಡುಬರುತ್ತದೆ. ಆದರೆ ಹೆಣ್ಣು ಭಾವನಾ ಜೀವಿಯಾಗಿದ್ದು, ಪ್ರೀತಿ, ಪ್ರೇಮ, ಮದುವೆ, ಗಂಡ ಬೆಚ್ಚನೆಯ ಪ್ರೀತಿ ಬಗ್ಗೆ ಸದಾ ಹಾತೊರೆಯುವ ಹೆಣ್ಣಿನ ಮನಸ್ಸಿನ ಅಂತರಾಳವನ್ನು ತಿಳಿಸುವ ಹಾಗೂ ಕಾಮ, ಪ್ರೇಮ, ಸ್ನೇಹದ ಬಗ್ಗೆ ವ್ಯಕ್ತಿಗಳಲ್ಲಿರು ಮನೋಭಾವನೆಯನ್ನು ಈ ಕಥೆಯಲ್ಲಿ ವ್ಯಕ್ತವಾಗಿವೆ.

'ಆಸೆಗಳು ಮುಳುಗುವುದಿಲ್ಲ' ಕಥೆಯಲ್ಲಿ ಗಂಡು ಹೆಣ್ಣು ಸಂಬಂಧಗಳು ಕಾಮ ಪ್ರೇಮಗಳ ಅನಿವಾರ್ಯತೆಯನ್ನು ಹಾಗೂ ಪ್ರತಿಷ್ಠಿತ ಶ್ರೀಮಂತ ವ್ಯಕ್ತಿಗಳಲ್ಲಿ ಈ ಪ್ರೇಮ ಕೇವಲ ಕಾಮವಾಗಿ ಮಾತ್ರ ಕಾಣುವುದನ್ನು ಹಾಗೂ ಹೆಣ್ಣು ಪುರುಷರಿಂದ ಅನುಭವಿಸುವ ಮಾನಸಿಕ ಹಾಗೂ ದೈಹಿಕ ಹಿಂಸೆಯನ್ನು, ಅಲ್ಲದೆ ಲೈಂಗಿಕ ಆಸಕ್ತಿಯ ಬಗ್ಗೆ ಹೆಣ್ಣಿನ ಅಂತರಾಳದ ಮಾತುಗಳನ್ನು ಇಲ್ಲಿ ಕಾಣಬಹುದಾಗಿದೆ.

ರೇಖಾರಾಣಿಯವರು ಕುಟುಂಬ ದಾಂಪತ್ಯ ಜೀವನ, ಗಂಡು ಹೆಣ್ಣಿನ ಸಂಬಂಧಗಳನ್ನು, ಹೆಣ್ಣಿನ ಮನಸ್ಸಿನ ಅಂತರಾಳದ ಪ್ರಶ್ನೆಗಳೂ, ಆಸೆ, ಬಯಕೆಗಳನ್ನು ಇಲ್ಲಿ ಕಾಣಬಹುದಾಗಿದೆ. ಇಲ್ಲಿ ಕತೆಗಾರ್ತಿ ಮಧ್ಯಮ ಪ್ರತಿಷ್ಠಿತ ವರ್ಗದ ವ್ಯಕ್ತಿಗಳಲ್ಲಿ ಕಾಮ, ಪ್ರೇಮಗಳು ಅನಿವಾರ್ಯವಾಗಿ

ಕಂಡುಬರುತ್ತದೆ. ಇಲ್ಲಿ ಕತೆಗಾರ್ತಿ ಹೆಣ್ಣಿನ ಮೂಲಭುತ ಸಮಸ್ಯೆಗಳನ್ನು ತಿಳಿಸುವುದಲ್ಲದೆ. ಪುರುಷರ ಗುಣಸ್ವಭಾವಗಳನ್ನು ಗ್ರಹಿಸುವ ಸೂಕ್ಷ್ಮತೆಯನ್ನು ಕಾಣಬಹುದಾಗಿದೆ. ಅಲ್ಲದೆ ಹೆಣ್ಣನ್ನು ಕೇವಲ ಭೋಗದ ವಸ್ತುವಾಗಿ ನೋಡುವ ಪುರುಷರಿಗೆ ಯಾವುದೇ ದ್ವೇಷವಿಲ್ಲದೆ ಅರಿವನ್ನು ಮೂಡಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅಲ್ಲದೆ ಕಾಮ ಪ್ರೇಮದ ಬಗ್ಗೆ ಯಾವುದೇ ಮಡಿವಂತಿಕೆಯಿಲ್ಲದೆ ಗಂಡು ಹೆಣ್ಣಿನ ಲೈಂಗಿಕಾಸಕ್ತಿಯ ಬಗ್ಗೆ ಹೇಳುವ ಕತೆಗಾರ್ತಿಯ ನೇರವಾದ ಮಾತುಗಳು ತನ್ಮಯತೆಯನ್ನು ಕಾಣಬಹುದಾಗಿದೆ. ಹೀಗೆ ಹೆಣ್ಣಿನ ಮನಸ್ಸಿನ ತುಮುಲಗಳನ್ನು ಕತೆಗಾರ್ತಿ ತಮ್ಮದೇ ಆದ ಅನುಭವಗಳನ್ನು ಅಭಿವ್ಯಕ್ತಿಸಿದ್ದಾರೆ.

## ಕೊನೆ ಟಿಪ್ಪಣಿಗಳು

೧. ವೀಣಾ ಶಾಂತೇಶ್ವರ ಮುಳ್ಳುಗಳು ಪು–೧೦

೨. ವೈದೇಹಿ ಸುಮ್ಮನಿರಲಾದದ್ದು ಕಥಾಸಂಕಲನ ಪು–೪೯

೩. ವೈದೇಹಿಯವರ 'ಚಿಪ್ಪು' ಪು–೧೧೦

೪. ಬಿ.ಟಿ ಜಾಹ್ನವಿ ಕಳೆದುಕೊಂಡವಳು ಮತ್ತು ಇತರ ಕಥೆಗಳು ೧೯೯೯,ಪು–೬೩

೫. ಬಿ.ಟಿ. ಜಾಹ್ನವಿಯವರ ಹುಡುಕಾಟ ಪು–೧೦

೬. ಬಿ.ಟಿ. ಜಾಹ್ನವಿಯವರ ಹುಡುಕಾಟ ಪು–೬

೭. ಸಂಧ್ಯಾ ಹೊನಗುಂಟಕರ ಹರಿದ ಹಾಸಿಗೆ ಹಂಬಲ, ೨೦೦೮, ಪು–೫೫

೮. ಸಂಧ್ಯಾ ಹೊನಗುಂಟಕರ ಹರಿದ ಹಾಸಿಗೆ ಹಂಬಲ, ೨೦೦೮. ಪು–೪೫

೯. ಸುಮಂಗಲಾ ಜುಮುರುಮಳ ೨೦೦೪, ಪು–೧೩೦

# ಅಧ್ಯಾಯ – ೪

# ಉಮಾರಾವ್ ಅವರ ಸಾಹಿತ್ಯ

**ಕತೆಗಳಲ್ಲಿ–ಅಗಸ್ತ್ಯ :**

ಸಾಹಿತ್ಯ ಪ್ರಕಾರದಲ್ಲಿ ಸಣ್ಣಕಥೆಯು ಒಂದು ವಿಶಿಷ್ಟ ಪ್ರಕಾರವಾಗಿದ್ದು, ಈ ಕಥೆಗಳು ರಚನೆಗೊಳ್ಳಲು ಕಥಾವಸ್ತು ಪ್ರಮುಖ ಪಾತ್ರವಹಿಸುತ್ತದೆ. ಕಥಾವಸ್ತು ಕಥೆಯ ಮುಖ್ಯ ಘಟನೆಯನ್ನು ಒಳಗೊಂಡಿದ್ದು, ಈ ಕಥಾವಸ್ತುವಿಗೆ ಪ್ರಸಂಗ, ಪಾತ್ರರಚನೆ, ಸಂಭಾಷಣೆ, ವರ್ಣನೆ ಮಹತ್ವದ ಸನ್ನಿವೇಶ ಅಂಶಗಳಾಗಿವೆ. ಕಥೆ ನಿರ್ಮಾಣವಾಗಲು ಈ ಅಂಶಗಳು ಪ್ರಧಾನ ಪಾತ್ರವಹಿಸುತ್ತವೆ. ಈ ಹಿನ್ನಲೆಯಲ್ಲಿ ಸಣ್ಣಕಥೆಯ ಸಾಹಿತ್ಯವನ್ನು ಕುರಿತು ಕಥೆಗಾರ್ತಿಯ ವಸ್ತು ಧೋರಣೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಈ ಸಂಕಲನಕ್ಕೆ ಹೆಸರುಕೊಟ್ಟ 'ಅಗಸ್ತ್ಯ' ಕತೆಯಲ್ಲಿ ಪ್ರತ್ಯೇಕತೆಯನ್ನು ನೋಡಬಹುದು. ಕತೆ ಕುತೂಹಲಕರವಾದ ವಾಕ್ಯದಿಂದ ಪ್ರಾರಂಭವಾಗುತ್ತದೆ. ಆಗತಾನೇ ತನ್ನ ಮಗನೂ ತಾನು ಪ್ರೀತಿಸುವ ಹುಡುಗಿಯನ್ನೇ ಮೆಚ್ಚಿರುವುದನ್ನು ತಿಳಿದ ಅಗಸ್ತ್ಯನಿಗೆ ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತೆ ಆಯಿತು. ('ಅಗಸ್ತ್ಯ' ಎನ್ನುವುದು ಅಪರೂಪವಾದ ಹೆಸರು. ಸಮುದ್ರವನ್ನೆ – ಅಪೋಶನ ತೆಗೆದುಕೊಳ್ಳುವ, ವಿಂಧ್ಯ ಪರ್ವತವನ್ನೇ ಮಣಿಸುವ ತಪಶಕ್ತಿಯನ್ನು ನೆನಪಿಗೆ ತರುವ ಹೆಸರು) ಕತೆಯನ್ನು ಓದಿದ ಕೂಡಲೇ ನಮಗಿದು ಗಮನಕ್ಕೆ ಬರುವುದಿಲ್ಲವಾದರೂ ನಿಜವಾಗಿ ಕತೆಯ ಕ್ರಿಯೆ ಕೆಲವೇ ಗಂಟೆಗಳಲ್ಲಿ ಮುಗಿಯುತ್ತದೆ. ಆದರೆ ಈ ಕೆಲವು ಗಂಟೆಗಳ ಕತೆ ಇಪ್ಪತ್ತೊಂದು ವರ್ಷಗಳ ವಿಶಿಷ್ಟ ಘಟನೆಗಳ ಪ್ರವಾಹವನ್ನು ಹಿಡಿದಿಡುತ್ತದೆ. ಈ ಕತೆಯಲ್ಲಿ ಪಾತ್ರಗಳ ಹೆಸರುಗಳು ಹೊಸ ರೀತಿಯಲ್ಲಿರುವುದನ್ನು ಕಾಣಬಹುದು. ಗಂಡು–ಹೆಣ್ಣಿನ ಸಂಬಂಧ ತಾತ್ಕಾಲಿಕವಾಗದೇರುವುದನ್ನು ನೋಡಬಹುದು. ಸತ್ಯ ಒಂದರಿಂದ ಇನ್ನೊಂದಕ್ಕೆ ಮುಂದುವರಿಯುತ್ತದೆ.

ಟೀಪ್ಲಾಂಟೇಶನಗಳ ಒಡೆಯ ರಮಾನಂದ ಅವರ ಒಬ್ಬನೇ ಮಗ ಅಗಸ್ತ್ಯ. ರಮಾನಂದ, ಸುಭದ್ರೆಯವರು ವಿಮಾನದ ಅಪಘಾತದಲ್ಲಿ ಪ್ರಾಣಬಿಟ್ಟಿರುತ್ತಾರೆ. ತಂದೆ ಸಂಪಾದಿಸಿದ್ದ ಎಸ್ಟೇಟುಗಳು, ಬಂಗಲೆ, ಲಕ್ಷಾಂತರ ರೂಪಾಯಿಗಳ ಆಸ್ತಿಯ ಒಡೆಯ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದಿಂದ ಜನೆಟಿಕ್ ಇಂಜಿನಯರಿಂಗನಲ್ಲಿ ಡಾಕ್ಟರೇಟ್, ಜೊತೆಗೆ ವಯೋಲಿನ ನುಡಿಸುವುದರಲ್ಲಿ ಪರಿಣಿತನಾಗಿರುತ್ತಾನೆ. ಅಮೆರಿಕಾದಲ್ಲಿ ತನ್ನ ಜೊತೆಗೆ ರಿಸರ್ಚ್ ಮಾಡುತ್ತಿದ್ದ ಹೊಂಗೂದಲಿನ ಚೆಲುವೆ ಮಿಮಿಯೊಡನೆ ಪರಿಚಯ, ಸ್ನೇಹ, ಪ್ರೇಮ, ಮದುವೆ ಮಗು ಆಗುವ ತನಕ ಅಮೇರಿಕಾದಲ್ಲಿ ಇರಲು ನಿರ್ಧಾರ ಮಾಡುತ್ತಾಳೆ. ಆರೋಗ್ಯವಾಗಿದ್ದ ಅತ್ಯಾಧುನಿಕ ಆಸ್ಪತ್ರೆಯಲ್ಲಿದ್ದು, ಏನು ತೊಂದರೆಯಿಲ್ಲದಿದ್ದರೂ, ಇದ್ದಕ್ಕಿದ್ದಂತೆ ಅತಿ ರಕ್ತಸ್ರಾವವಾಗಿ, ಮಗು ಹುಟ್ಟುವ ಕೆಲವೇ ಗಂಟೆಗಳಲ್ಲಿ ಪ್ರಾಣಬಿಟ್ಟಿದ್ದಳು ಮಿಮಿ ತಾಯಿ ಇಲ್ಲದೆ ತಂದೆಯ ಆಸರೆಯಲ್ಲಿ ಬೆಳೆಯುತ್ತಾನೆ. ಅಗಸ್ತ್ಯ ಮಗುವಾಗಿದ್ದಾಗ ತನ್ನನ್ನು ಬೆಳೆಸಿದ ಆಯಾ, ಈಗ ವರುಣನನ್ನು ನೋಡಿಕೊಳ್ಳಲು ಅವಳನ್ನೆ ನೇಮಿಸಿದ. ತಾನೂ ಓದಿದ ಡೂನ್ ಸ್ಕೂಲಿಗೆ ವರುಣನನ್ನೂ ಕಳಿಸಿದ. ಹೆಚ್ಚು ಕಡಿಮೆ ತಂದೆ ಬೆಳೆದ ಪರಿಸರದಲ್ಲಿ ಬೆಳೆದ ವರುಣನ ವ್ಯಕ್ತಿತ್ವ, ಅಗಸ್ತ್ಯನ ವ್ಯಕ್ತಿತ್ವಕ್ಕಿಂತ ಹೆಚ್ಚು ವಿಭಿನ್ನವಾಗಿರಲಿಲ್ಲ.

ರಜಕ್ಕೆಂದು ಊರಿಗೆ ಬಂದಿದ್ದ ವರುಣ ಮ್ಯಾನೇಜರ್ ಮಗ ನಂದುವಿನೊಡನೆ ಮಿಂಚುಹುಳು ಹಿಡಿಯುತ್ತ ಆಟವಾಡುತ್ತಿದ್ದ ಅವರನ್ನು ನೋಡಿ ಮೈಮರೆತು ಕಲ್ಲುಬೆಂಚಿನ ಮೇಲೆ ಕುಳಿತಿದ್ದ. ಅಗಸ್ತ್ಯನಿಗೆ ಯಾವುದರ ಪರಿವೆಯೂ ಇಲ್ಲದೆ, ಮಿಂಚುಹುಳುವೊಂದನ್ನು ಹಿಡಿಯಲು ಪ್ರಯತ್ನಿಸುತ್ತಿದ್ದ. ಅವರು ದೂರವಾದಾಗ ಹಿಂದಿನ ನೆನಪೊಂದು ಕಾಡುತ್ತೆ. ಅಗಸ್ತ್ಯ ಬಾಲ್ಯದಲ್ಲಿ ತನ್ನ ಸ್ನೇಹಿತ ರಾಮನೊಂದಿಗೆ ಮಿಂಚುಹುಳುವನ್ನು ಹಿಡಿಯಲು ಹೋದಾಗ ಅವರಲ್ಲಿ ರಾಮ ಹುಳುವನ್ನು ಹಿಡಿಯುತ್ತಾನೆ. ಅದನ್ನು ಪಡೆಯಲು ಕಿತ್ತಾಟವಾಗಿ ರಾಮನನ್ನು ತಳ್ಳುತ್ತಾನೆ. ಇದರಿಂದ ರಾಮನನು ತತ್ತರಿಸಿ ಹೋಗುತ್ತಾನೆ. ಪ್ರಾಣ ಕಳೆದಿರುತ್ತಾನೆ. ಇದು ನೆನಪಿಗೆ ಬಂದು ತಕ್ಷಣ ವರುಣ ಹತ್ತಿರ ಧಾವಿಸುತ್ತಾನೆ.

ಹದಿನೇಳನೆಯ ವಯಸ್ಸಿನಲ್ಲಿ ಓದಿಗಾಗಿ ಅಮೆರಿಕಾಗೆ ವರುಣನನ್ನು ಕಳಿಸಿದಾಗ ಅಗಸ್ತ್ಯ ಏಕಾಂಗಿಯಾದ. ತನ್ನ ಸಮಯವೆಲ್ಲಾ ಪುಸ್ತಕ, ಪಕ್ಷಿಗಳ ಪ್ರಪಂಚದಲ್ಲಿ ಮುಳುಗುತ್ತಿದ್ದ. ಅಪರೂಪವಾಗಿ ನ್ಯೂ ಇಯರ್ ಪಾರ್ಟಿಯೊಂದರಲ್ಲಿ ಹತ್ತಿರದ ಎಸ್ಟೇಟಿನಿಂದ ಘನಶ್ಯಾಮನ ಮಗಳು ಶರ್ಮಿಷ್ಠಾಳ ಪರಿಚಯವಾಗಿತ್ತು. ಹತ್ತೊಂಬತ್ತನೇ ವಯಸ್ಸಿನ ಮಿಂಚಿನಂತಹ ಹುಡುಗಿ ಮಿಮಿಯನಂತರ ಶರ್ಮಿಷ್ಠಾಳು ಬೆಳಕಾಗಿ, ತಂಗಾಳಿಯಾಗಿ ಬಂದಿದ್ದಳು. ಅವಳೊಡನೆ ಸಂಬಂಧ ಆಳವಾದಂತೆ, ಪ್ರೀತಿ ಬೇರೂರಿದಂತೆ, ಅಗಸ್ತ್ಯ ಹೊಸ ಮನುಷ್ಯನಾಗುತ್ತಾನೆ.

ಇಪ್ಪತ್ತು ವರ್ಷದ ಮಗನಿಂದ ತಂದೆಯೊಡನೆ ಸಂಬಂಧ ಬೆಳೆಸುವುದು ಸಮಂಜಸವಲ್ಲ ಎಂದು ಸಮಸ್ಯೆಗಳನ್ನು ವಿವರಿಸಿದರೂ ಯಾವುದಕ್ಕೂ ಅಲ್ಲಾಡದ ಅವರ ಮನಸ್ಸು ಅರಿವಾಗಿ ತನಗೆ

ಬೇಕಾದದ್ದನ್ನು ಮಾಡಿಯೇ ತೀರುವ ಶರ್ಮಿಷ್ಠಾಳ ಮನಸ್ಸು ಬದಲಾಯಿಸುವ ಪ್ರಯತ್ನವನ್ನು ಬಿಟ್ಟರು. ಶರ್ಮಿಷ್ಠಾ, ಅಗಸ್ತ್ಯರ ಪ್ರೀತಿ ಮುಂದುವರಿಯುತ್ತೆ. ತನ್ನ ಭಾವನೆಗಳನ್ನು, ಕನಸುಗಳನ್ನು ಅವಳೊಡನೆ ಹಂಚಿಕೊಂಡಾಗ, ಅಗಸ್ತ್ಯನಿಗೆ ಇದುವರೆಗೂ ಕೊರತೆಯಿದ್ದ ಭಾವನೆ ಮತ್ತೆ ಪರಿಪೂರ್ಣತೆ ಪಡೆದ ಅನುಭವ ಕೆಲವು ದಿನಗಳ ಮಾತ್ರವೇ ಆಗಿರುತ್ತದೆ.

ರಜೆಕ್ಕಾಗಿ ಊರಿಗೆ ಬರುವವನಿದ್ದ ವರುಣನ ಆಗಮನವನ್ನು ಕಾಯುತ್ತಿದ್ದ ಶರ್ಮಿಷ್ಠಾ ಮತ್ತು ಅಗಸ್ತ್ಯರವರಿಗೆ ತಡೆಯಲಾರದಷ್ಟು ಕುತೂಹಲವಾಗುತ್ತೆ. ವರುಣನನ್ನು ಭೇಟಿಯಾಗಲು ಹೋಗುವ ಸಂದರ್ಭದಲ್ಲಿ ಟೀ ಕುಡಿಯುವಾಗ ಶಮಿ, ನಾನು ನಿನ್ನನ್ನು ಎಷ್ಟು ಪ್ರೀತಿಸುತ್ತೇನೆ ಗೊತ್ತಾ? ನೀನು ನನ್ನ ಲೈಫನಲ್ಲಿ ಬರುವ ಮುಂಚೆ ಎಂಥಾ ಕೊರತೆ ಇತ್ತೊಂತ ನಂಗೆ ಈಗ ಅರ್ಥ ಆಗ್ತಾ ಇದೆ! ಯೂ ಹ್ಯಾವ್‌ಗಿವನ್ ಎ ನ್ಯೂ ಡೈಮೆನ್‌ಷನ್ ಟು ಮೈ ಲೈಫ್ ಎಂದು ಹೇಳಿ ಮುತ್ತುಕೊಡುತ್ತಾನೆ. ನಂತರ ಏರ್‌ಪೋರ್ಟ್‌ಗೆ ಹೊರಡುತ್ತಾರೆ. ವರುಣನ ಬೇಟಿಯಾಗುತ್ತೆ ಶರ್ಮಿಷ್ಠಾಳನ್ನು ಶಮಿ ಎಂದು ಪರಿಚಯವಾಗುತ್ತೆ. ಇವರ ಇಬ್ಬರಲ್ಲಿಯೂ ಯಾವುದೇ ರೀತಿಯಲ್ಲಿ ವ್ಯತ್ಯಾಸವಿಲ್ಲದಂತೆ ದಿಗ್ಭ್ರಮೆಗೊಳ್ಳುತ್ತಾಳೆ. ವರುಣ ಊರಿಗೆ ಬಂದ ಮೇಲೆ ಎಲ್ಲವೂ ಬದಲಾಗತೊಡಗುತ್ತದೆ. ವರುಣ, ಅಗಸ್ತ್ಯ, ಶಮಿ ಒಟ್ಟಿಗೆ ಕಾಲಕಳೆಯುತ್ತಿದ್ದರು. ಅಮೆರಿಕಾದ ಯೂನಿವರ್ಸಿಟಿಗಳು, ಹುಡುಗಿಯರು, ಕಂಪ್ಯೂಟರ್, ಕಲ್ಚರ್, ನ್ಯೂಟ್ರಾನ್, ಬಾಂಬ್, ನೈಟ್‌ಕ್ಲಬ್‌ಗಳು, ಪೀಟ್ಸಾ, ಡ್ರಗ್ಸ್, ಅಡಿಷನ್, ರೋನಾಲ್ಡ್ ಹೀಗೆ ಎಲ್ಲವನ್ನು ಹೇಳುತ್ತಾ ಅವರ ಸಂಬಂಧವು ಮತ್ತಷ್ಟು ಬೆಳೆಯುತ್ತದೆ. ಅವನು ವಯೋಲಿನ್ ನುಡಿಸುತ್ತಿದ್ದ ಅವರು ಮೈಮರೆತು ಕೇಳುತ್ತಿದ್ದರು. ತಂದೆ ಮತ್ತು ಮಗ ಯಾವುದೇ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ಇಲ್ಲದೇ ಅವರ ಮನಸ್ಥಿತಿಗಳು ಒಂದೇಯಾಗಿರುತ್ತಿದ್ದವು. ಇದನ್ನು ನೋಡಿ ಅಚ್ಚರಿಯಾಗುತ್ತಿದ್ದಳು.

ಶಮಿಯು ದಿನಗಳೆದಂತೆ ಹೆಚ್ಚು ಕಾಲ ವರುಣನ ಜೊತೆಗೆ ಕಳೆಯುತ್ತಾಳೆ ಇವರ ಇಬ್ಬರಲ್ಲಿ ಯಾವುದೇ ರೀತಿಯ ಮನಸ್ಸಿನ ಅಂತರ ಇರುವುದಿಲ್ಲ ಭಾವನೆಗಳು ಒಂದೇ ರೀತಿಯಲ್ಲಿ ಇರಲು ಸಾಧ್ಯವಾಗಿರುತ್ತದೆ. ಎಷ್ಟೋ ಸಲ ತಮ್ಮ ಪ್ರಪಂಚದಲ್ಲಿ ಅಗಸ್ತ್ಯನನ್ನು ಮೈಮರೆತುಬಿಡುತ್ತಿದ್ದರು. ಇದು ತನಗೆ ಅರಿವಾದಾಗ ವಯಸ್ಸಿಗೆ ಮೀರಿದ ಕೆಲಸವನ್ನು ನಾನು ಮಾಡಬಾರದೆಂದು ಅರಿವನ್ನು ಪಡೆದಿರುತ್ತಾನೆ. ವರುಣ ಊರಿಗೆ ಹೋಗಲು ಕೆಲವು ದಿನಗಳ ಮಾತ್ರ ಉಳಿದಿದ್ದಾಗ ಎಷ್ಟೇಟಿನತ್ತಿರ ಧಾವಿಸಿರುತ್ತಾನೆ. ವರುಣ ಮತ್ತು ಶಮಿ ನಿಧಾನವಾಗಿ ಸೇರುತ್ತೇನೆಂದು ಅಗಸ್ತ್ಯ ಹೇಳಿರುತ್ತಾನೆ. ತಾವು ದಿನಾ ಸೇರುತ್ತಿದ್ದ ಕೊಳದಂಚಿನತ್ತ ನಡೆದಾಗ ಅವರು ಕಾಣುವುದಿಲ್ಲ. ನಿಧಾನವಾಗಿ ಹೆಜ್ಜೆ ಹಾಕತೊಡಗಿದಾಗ ಎದುರಿಗಿದ್ದ ಬೃಹದಾಕಾರದ ಮರದ ಹಿಂದಿನಿಂದ ಅವರ ಧ್ವನಿಕೇಳಿ ಬೆಚ್ಚಿ ಬೀಳುತ್ತಾನೆ. ವರುಣನ ಒಲವಿನ ಮೆಲುನುಡಿ ಇವನತ್ತ ತೇಲಿಬಂದಿತು, "ಶಮಿ, ನಾನು ನನ್ನನ್ನು

ಎಷ್ಟು ಪ್ರೀತಿಸ್ತೀನಿ ಗೊತ್ತಾ! ಇದುವರೆಗೂ ನನ್ನ ಲೈಫ್‌ನಲ್ಲಿ ಎಂಥಾ ಕೊರತೆ ಇತ್ತೂಂತ ಈಗ ಗೊತ್ತಾಗ್ತಾ ಇದೆ. ಯೂ ಹ್ಯಾವ್ ಗಿವನ್ ಏ ನ್ಯೂಡೈಮೆನೆಷನ್ ಟು ಮೈ ಲೈಫ್ ಎಂಬುದು ಕೇಳಿಬರುತ್ತೆ. ಅಗಸ್ತ್ಯನಿಗೆ ಶಮಿ ವರುಣನನ್ನು ಪ್ರೀತಿಸುತ್ತಾಳೆ. ತನಗಿಂತ ಹೆಚ್ಚಾಗಿ ಅವನನ್ನು ಪ್ರೀತಿಸುತ್ತಾಳೆ. ಅವಳ ವಯಸ್ಸಿನ ಸಂಗೀತಕ್ಕೆ ತಾಳ ಹಾಕುವ ಯೌವ್ವನ ಅವನಲ್ಲಿದೆ. ಅವಳು ವರುಣನನ್ನು ಪ್ರೀತಿಸುವುದು ಅವಳ ಕೈಮೀರಿದ ವಿಷಯ, ಪ್ರಕೃತಿ ದತ್ತವಾದ ವಿಷಯವಾಗಿದೆ ಎಂದು ಅರಿವಾಗುತ್ತದೆ.

ಈ ಕತೆಯು ಕಾಲವನ್ನು ನಿರ್ವಹಿಸಿರುವ ರೀತಿಯೂ ಗಮನಾರ್ಹವಾದದ್ದು. ಬರಿಯ ಬುದ್ಧಿಯನ್ನೇ ನೆಚ್ಚಿ ಹೃದಯದ ಬೇಡಿಕೆಗಳನ್ನು ಕಡೆಗಣಿಸುವ ಜಾಣನ ಮೇಲೆ ಹೃದಯ ಮುಯ್ಯಿ ತೀರಿಸುತ್ತದೆ. ಭಾವನೆಗಳನ್ನು ಕಡೆಗಣಿಸಿದ ಅವನ ಬುದ್ಧಿವಂತಿಕೆಯ ಮೊದಲಬಲಿ ಅವನ ಹೆಂಡತಿ, ಎರಡನೆಯ ಬಲಿ ಅವನೇ ಅವನ ಪ್ರಾಣ ಬಲಿಯಾಗುವ ಮೊದಲು ತನ್ನ ಪ್ರಯೋಗದ ಸ್ವರೂಪದ ಕಲ್ಪನೆಯಾದಾಗ ಅವನ ಆತ್ಮವಿಶ್ವಾಸ ಬಲಿಯಾಗುತ್ತದೆ. ತಾಯಿಯ ಅಂಶವಿಲ್ಲದೆ ಮಗನನ್ನು ಸೃಷ್ಟಿಬಯಸಿದವನು ದಿಗ್ಭ್ರಮೆಗೊಂಡಾಗ ಕಣ್ಣಮುಂದೆ ಕಾಣುವ ದೃಶ್ಯದಲ್ಲಿ ವರುಣ-ಶರ್ಮಿಷ್ಠಾಯರ ಒಲವಿನಾಟದಲ್ಲಿ ಕ್ರಮೇಣ ಶರ್ಮಿಷ್ಠಾಯ ಸ್ಥಾನದಲ್ಲಿ ವರುಣನ ತಾಯಿ ಮಿಮಿ ನಿಲ್ಲುವುದು ಅರ್ಥವಾಗುತ್ತದೆ. ತುಂಬಾ ಕುತೂಹಲಕರವಾದ ಕೌಶಲವನ್ನು ತೋರುವ ಕತೆ ಇದು. ಇಷ್ಟಾದರೂ ನನ್ನ ಮನಸ್ಸಿನ ಮೂಲೆಯೊಂದರಲ್ಲಿ ಬೌದ್ಧಿಕ ಅಂಶವೇ ಪ್ರಧಾನವಾಯಿತೋ ಎಂಬ ಪ್ರಶ್ನೆಯು ಇಲ್ಲದಿಲ್ಲ. ಆದರೆ ಇದು ವಿಶಿಷ್ಟವಾದ ರಚನೆ ಎಂಬುದರಲ್ಲಿ ಸಂದೇಹವಿಲ್ಲ.

**'ಶೂಪಾಲಿಶ್ ಹುಡುಗ' 'ಕೆಂಪು-ಹಳದಿ-ಹಸಿರು'**

ಈ ಕಥೆಗಳನ್ನು ಓದುವಾಗ ಒಂದೇ ಕಥೆಯನ್ನು ಎರಡು ಸಲ ಬರೆದಿದ್ದಾರೆ ಎಂದು ಎನಿಸುತ್ತದೆ. ಎರಡು ಕತೆಗಳ ಕೇಂದ್ರ ವ್ಯಕ್ತಿಯೂ ನಿಸ್ಸಹಾಯಕ ಹುಡುಗ. ಎರಡರಲ್ಲಿಯೂ ಅವನು ಮುಂಬಯಿ ಮಹಾನಗರದ ನಿರ್ವಿಕಾರ ಪ್ರವಾಹದಲ್ಲಿ ಹೇಗೋ ಉಳಿಯಬೇಕಾದ ಎಳೆಯ ಹುಡುಗ ರಾಮು ಒಬ್ಬ 'ಕಾಕಿಯ' ಅಧೀನವಾಗಿರುತ್ತಾನೆ. ಕಾಕಿ ಎನ್ನುವಳು ಅಪರಿಚಿತ ವ್ಯಕ್ತಿಯಾಗಿರುತ್ತಾಳೆ. ಈ ಕಥೆಗಳಲ್ಲಿ ಮನುಷ್ಯನ ಸಂಬಂಧಗಳು ವೈವಿಧ್ಯತೆಯಲ್ಲಿರುವುದನ್ನು ನೋಡಬಹುದು. ರಾಮುನ ತನ್ನ ಸಮಾನ ವಯಸ್ಕರು ತನಗಿಂತ ಚಿಕ್ಕವರು ಗರಿಮುರಿಯಾದ ಯೂನಿಫಾರಂನಲ್ಲಿ ಶಾಲೆಗೆ ಹೋಗುವುದು ಆಡುವುದು ಕಂಡು ಅವನಿಗೆ ತಾನೂ ಹಾಗೆ ಹಕ್ಕಿಯಾಗಿ ನಲಿಯಬೇಕೆಂಬ ಆಸೆ-ಆದರೆ ಆ ಆಸೆ ಪುಡಿಯಾಗುತ್ತದೆ. ಕಾರಣ ಬಡತನವು ಆಗಿರುತ್ತದೆ.

ಆಧುನಿಕತೆಯಲ್ಲಿ ವ್ಯಾಪಾರವೂ ವಿಭಿನ್ನವಾಗಿರುವುದನ್ನು ನೋಡಬಹುದು. ಬಾಬಾ ಎನ್ನುವರು ಭವಿಷ್ಯವನ್ನು ಹೇಳಿ ಜೀವನ ನಡೆಸುತ್ತಿರುತ್ತಾರೆ. ಹಾಗೆ ಬಲಗಡೆಯಲ್ಲಿ ಕೂಡುತ್ತಿದ್ದವನು 'ಚಾನಾವಾಲಾ'

ಅವನಿಗೆ ಬಿಡುವಿಲ್ಲದ ವ್ಯಾಪಾರ ಮಾಡುತ್ತಾ ಗಿರಾಕಿಗಳಿಗೆ 'ಚನಾ-ಕುರ್ಮುರಾ' ತುಂಬಿಸಿ ಕೊಡುತ್ತಿದ್ದ ಅವನ ಕೈಯಲ್ಲಿ ನಕಲು ಬಂಗಾರದ ಕೈಗಡಿಯಾರ ಅವನ ಅಂತಸ್ತು ಮಿಕ್ಕವರಿಗಿಂತ ಹೆಚ್ಚು ಆ ಸಾಲಿನ ವ್ಯಾಪಾರಿಗಳೆಲ್ಲಾ ಕೇಳಿದಾಗ ಹೆಮ್ಮೆಯಿಂದ 'ಟೈಮ್' ತಿಳಿಸುತ್ತಿದ್ದ.

ಕುಣಿಯುವ ಬೊಂಬೆಗಳನ್ನು ಮಾರಾಟಮಾಡುತ್ತಿದ್ದು ಜೀವನ ಸಾಗಿಸುತ್ತಿರುತ್ತಾನೆ. ಆ ಬೊಂಬೆಗಳನ್ನು ಕೊಳ್ಳಲು ಮುಂದಾದಾಗ ಕಾಕಿ, ಸುಮ್ಮನೆ ದುಡ್ಡು ದಂಡ. ನೀನೇನೂ ಎಳೆ ಮಗೂನೇ ಗೊಂಬೆ ಇಟ್ಕೊಂಡು ಆಡೋಕೆ? ಆ ಕಸಕ್ಕೆಲ್ಲಾ ದುಡ್ಡು ಹಾಕೋಕೆ ನಾವೇನೂ ಲಕ್ಷಾಧೀಶ್ವರಲ್ಲ. ಸಧ್ಯ, ಎರಡು ಹೊತ್ತು ಹೊಟ್ಟೆತುಂಬಾ ಊಟ ಮಾಡಿದರೆ ಸಾಕಾಗಿದೆ ಎಂದು ಹೇಳುತ್ತಾಳೆ. ಸಾಲಿನ ಕೊನೆಯಲ್ಲಿ ಕಬ್ಬಿನ ರಸದಗಂಡಿ, ಹಳೆಯ ಪುಸ್ತಕ ಮಾರುವವರು ಹೀಗೆ ವಿಭಿನ್ನ ರೀತಿಯ ವ್ಯಾಪಾರಸ್ಥರನ್ನು ಕಾಣಬಹುದಾಗಿದೆ. ರಾಮುಗೆ ಸಿನಿಮಾ ಅಂದರೆ ತುಂಬಾ ಆಸೆ. ಕಾಕಿ ಬಿಡುತ್ತಿರಲಿಲ್ಲ. ಆದ್ದರಿಂದ ರಾಮು ತನ್ನ ಕೆಲಸದಲ್ಲಿ ನಿರತನಾಗಿದ್ದ. ತನ್ನ ಕೆಲಸದಲ್ಲಿ ನಿರತನಾಗಿದ್ದ ಸಮಯದಲ್ಲಿ ದೂರದರ್ಶನ ಕೇಂದದ್ರವರು ಬರುತ್ತಾರೆ. ಅವರಿಗೆ ಪಾಲಿಶ್ ಹಾಕಲೆ ಎಂದು ಕೇಳಿದಾಗ "ನಾವು ದೂರದರ್ಶನ ಕೇಂದ್ರದವರು ನಿನ್ನ ಹಾಗೆ ದಿನವೆಲ್ಲಾ ಕಷ್ಟಪಟ್ಟು ತಮ್ಮ ಸಂಪಾದನೆ ತಾವೇ ಮಾಡಿಕೊಂಡು ಜೀವನಾ ನಡೆಸ್ತಾರಲ್ಲ ಅಂತಹ ಪುಟ್ಟ ಮಕ್ಕಳನ್ನು ನಾವು ಟಿ.ವಿ.ನಲ್ಲಿ ಸಂದರ್ಶನಕ್ಕೆಂದು ಕರೆದುಕೊಂಡು ಹೋಗೋಣಾಂತ ಬಂದಿದ್ದೀವಿ. ನೀನು "ಟಿ.ವಿ. ನೋಡಿರ್ಬೇಕಲ್ಲಾ ಅದರಲ್ಲಿ ನಿಂಗೂ ಬರಬೇಕಂತ ಆಸೆ ಇದೆಯೋ ಇಲ್ವೋ..?" ಎಂದು ಕೇಳುತ್ತಾರೆ. ನಾವು ಒಂದು ಪ್ರೋಗ್ರಾಂಗೋಸ್ಕರ ನಿನ್ನನ್ನು ಇಂಟರ್‌ವ್ಯೂ ಮಾಡ್ತೀವಿ. ನೀನು ದೂರದರ್ಶನ ಕೇಂದ್ರಕ್ಕೆ ಬಂದು ನಮ್ಮ ಜೊತೆ ಮಾತನಾಡಬೇಕು ಎಂದು ತಿಳಿಸುತ್ತಾರೆ. ರಾಮೂಗೆ ನೂರಾರು ಪ್ರಶ್ನೆಗಳ ಸುರಿಮಳೆಯಾಗುತ್ತೆ. ಅವನಿಗೆ ಚಾಹ ತಂದು ಕೊಟ್ಟ ಇರಾನಿನ ಹೋಟೆಲಿನವ ದುಡ್ಡು ತೆಗೆದುಕೊಳ್ಳಲಿಲ್ಲ. ಚನಾವಾಲಾ ತನ್ನ ಮಗನ ಹೊಸ ಚಡ್ಡಿ-ಶರಟುಗಳನ್ನು ಪ್ರೋಗ್ರಾಂಗೆ ಹಾಕಿಕೊಳ್ಳಲು ಕೊಡುವುದಾಗಿ ಬೆನ್ನು ತಟ್ಟಿದ. ಕೈ ನೋಡುವ ಬಾಬಾ ಮನಸಾರೆ ಆಶೀರ್ವದಿಸಿ ನಂಗೆ ನಿನ್ನ ಮುಖ ಲಕ್ಷಣದಿಂದಲೇ ಗೊತ್ತಾಗಿತ್ತು. ಒಂದುದಿನ ದೊಡ್ಡ ಮನುಷ್ಯ ಆಗ್ತಿ ಅಂತ. ಬರೀ ಪಾಲೀಶ್ ಹುಡುಗನ ಕೈ ಇದಲ್ಲ ಎಂದು ಜಂಬದಿಂದ ಹೇಳಿದ.

ರಾಮು ದೂರದರ್ಶನ ಕೇಂದ್ರಕ್ಕೆ ಹೋಗಿ ಬಂದ ಮೇಲೆ ಅವನ ಸುತ್ತಲೂ ಜನಜಂಗುಳಿ ಹೆಚ್ಚಾಗಿತ್ತು. ಪ್ರೋಗ್ರಾಂ ಶುರುವಾದಂತೆ ಮೊದಲು ಒಬ್ಬ ನ್ಯೂಸ್ ಪೇಪರ್ ಹುಡುಗ ಕೊನೆಗೆ ರಾಮು ಪ್ರೋಗ್ರಾಂನಲ್ಲಿ ಕಥೆಯು ಮುಕ್ತಾಯ ಹಾಸ್ಯದತ್ತವಾಲುತ್ತದೆ ಎಂದು ಹೇಳಬಹುದು. ದೊಡ್ಡವನಾದ ಮೇಲೆ ಏನಾಗಬೇಕೆಂದು ಆಸೆ ಎಂದು ಹುಡುಗನಿಗೆ ಕೇಳಿದಾಗ, ಅವನ ಉತ್ತರ "ಕೊಲಾಬಾದಲ್ಲಿ ದೊಡ್ಡ ಶೂ ಅಂಗಡಿ ಇಡಬೇಕಂತ ಆಸೆ. ದೊಡ್ಡ ಕೆಂಪುಬಣ್ಣದ ಕಾರು

ತಗೊಬೇಕಂತ ಆಸೆ" ಕೆಂಪು ಬಣ್ಣದ ಕಾರು ಅವನ ಅತ್ಯದ್ಭುತ ಕನಸಿನ ಲೋಕದ ಸಂಕೇತ. ಆ ಲೋಕಕ್ಕೆ ದಾರಿ 'ಶೂ'ಗಳೇ ಶೂಗಳು ಅವನ ಕೈಗಳಿಗೆ ತಗಲುವುದು ಮಾತ್ರವಲ್ಲ ಅವನ ಚೇತನದೊಳಕ್ಕೆ ಇಳಿದುಬಿಟ್ಟಿರುತ್ತವೆ.

ಕೆಂಪು–ಹಳದಿ–ಹಸಿರು; ನಿಲ್ಲಿ–ಕಾಯಿರಿ–ಮುಂದೆ ಎಂಬುದರಲ್ಲಿ ಹುಡುಗ ತನಗೆ ಅರ್ಥವಾಗದ ಜಗತ್ತಿನಲ್ಲಿ ತನ್ನನ್ನು ಮೀರಿದ ಶಕ್ತಿಗಳ ನಿರಂತರ ಬಂದಿಯಾಗಿರುತ್ತಾನೆ. ಮುನ್ನಾ ಟ್ರಾಫಿಕ್ ಸಿಗ್ನಲ್‌ನಲ್ಲಿ ಅವನ ದಿನದ ರೊಟ್ಟಿಯ ಗಳಿಕೆಯಾಗಿರುತ್ತದೆ. ಅಪ್ಪ ಅಮ್ಮ ತಂಗಿಯವರು ತುಂಬಾ ಕಷ್ಟದಿಂದ ಜೀವನ ಸಾಗಿಸುತ್ತಿದ್ದರು. ಮುಂಬೈಯಿಂದ ಅವರ ಕಾಕಾ ಬಂದಿದ್ದ ಕಾಕಾ ಪ್ಯಾಂಟು –ಶರಟು ಧರಿಸಿ, ಕೈಗೆ ವಾಚು ಕಟ್ಟಿ, ಶೂ ಹಾಕಿ ಜೋರಿನಿಂದ ಇರುತ್ತಾನೆ. ಇವರ ಬದುಕನ್ನು ನೋಡಿ ನಾನು ಮುನ್ನಾನು ಕರೆದುಕೊಂಡು ಹೋಗಿ ಒಳ್ಳೆಯ ಸ್ಕೂಲಿನಲ್ಲಿ ಸೇರಿಸಿ ದೊಡ್ಡ ಆಫೀಸರ್ ಮಾಡ್ತೀನಿ ಖರ್ಚೆಲ್ಲಾ ನಂದೇ ಎಂದು ಹೇಳುತ್ತಾನೆ. ಅಪ್ಪ ಅಮ್ಮ ಅವರನ್ನು ಬಿಡಲು ಆಗುವುದಿಲ್ಲ ಆದರೂ ತಾಯಿಯ ಮಾತುಗಳಿಂದ ಮುಂಬೈಗೆ ಹೋಗಲು ಒಪ್ಪುತ್ತಾನೆ. ಮುಂಬೈನಲ್ಲಿ ಇವರ ಜೀವನ ಸಾಗಿಸಲು ತುಂಬಾ ಕಷ್ಟದಾಯಕರವಾಗುತ್ತದೆ. ಇವನನ್ನು ನೋಡಿದ ತಕ್ಷಣ ಗೋಣಗುತ್ತಾಳೆ. ಎಲ್ಲರಿಗೂ ಅವರ ಜೀವನವೇ ಸಾಕಾಗಿರುತ್ತದೆ. ಅವರು ಅಲ್ಲಿಗೆ ಬಂದ ಎಂಟು ಹತ್ತುದಿನಗಳಲ್ಲಿ ಅವರ ಬದುಕಿನ ಪರಿಚಯವಾಗುತ್ತದೆ. ಅವರ ಕಾಕಿ ೫–೬ ಮನೆಗಳ ಪಾತ್ರೆ ಬಟ್ಟೆ ಕೆಲಸ ಮಾಡಿ ಜೀವನ ಸಾಗಿಸುವುದಾಗಿರುತ್ತದೆ. ಕಾಕಿ ಮುಂಜಾನೆ ಮನೆ ಬಿಟ್ಟರೆ ಸಂಜೆ ಮನೆಗೆ ಸೇರುತ್ತಿದ್ದ ಮನೆಯ ಮುಕ್ಕಾಲು ಕೆಲಸ ಇವನದೇ ಆಗಿರುತ್ತದೆ. ದಿನಗಳುರಳಿ ತಿಂಗಳಾದರು ಸ್ಕೂಲಿನ ವಿಷಯವೇ ಎತ್ತುತ್ತಿರಲಿಲ್ಲ. ಸ್ಕೂಲಿನ ವಿಷಯ ಕೇಳಿದಾಗ ಬಿಟ್ಟಿ ಕೂಳು ತಿನ್ನೋಕೆ ನಾಚಿಕೆ ಆಗಲ್ಲೊ ಮೊದಲು ಕೆಲಸ ನಿನ್ನ ಅನ್ನ ನೀನು ಸಂಪಾದಿಸಿಕೋ ಎಂಬುದಾಗಿ ಹೇಳುತ್ತಾರೆ.

ಮನೆಯ ಎದುರಿಗೆ ಸಿಗ್ನಲ್‌ನಲ್ಲಿ ನಿಂತಿದ್ದು, ಕಾರುಗಳು ಬಂದಾಗ ಅವನ್ನು ಒರಿಸಿ ಸಲಾಂ ಹೊಡೆದರೆ ಹತ್ತು ಪೈಸಾನೋ ನಾಲ್ಕಾಣೆನೋ ಸಿಗುತ್ತೆ. ಎಂಬುದಾಗಿ ಹೇಳುತ್ತಾರೆ. ಅವನು ಅಲ್ಲಿಗೆ ಹೋದಾಗ ಇವನಿಗಿಂತ ಮುಂಚೆಯೇ ಅಲ್ಲಿ ಸೇರಿರುತ್ತಾರೆ. ದೀಪ ಕೆಂಪಗಾಗುತ್ತಲೇ, ಕಾರುಗಳಿಂದ ಸುತ್ತುವರಿದು ಮಧ್ಯೆನಂತ ಅವನಿಗೆ ಕಾಲುಗಳಲ್ಲಿ ನಡುಕು ಹುಟ್ಟುತ್ತೆ. ನಂತರ ಎಲ್ಲಾ ಸರಿ ಹೋಗಿ ದಿನವೆಲ್ಲಾ ೮೫ ಪೈಸೆ ಪಡೆದಿರುತ್ತಾನೆ. ಕಾಕಿಗೆ ಕೊಡಲು ನಿರ್ಧಾರಿಸುತ್ತಾನೆ. ಆದರೆ ಇವನ ಜೊತೆಗಾರರು ಬಂದು ಅದನ್ನು ಕಸಿದುಕೊಂಡು ಮನೆಗೆ ಕಳುಹಿಸುತ್ತಾರೆ. ಇವನ ಅಸಾಹಯಕತೆಯನ್ನು ನೋಡಿ ಬಯ್ಯುತ್ತಾರೆ. ಕಾಕನೇ ಬಂದು ಬಿಟ್ಟು ಅವನ ಜೊತೆಗಾರರಿಗೆ ಆತನ ತಂಟೆಗೆ ಬಂದ್ರೇ ಕೊಂದುಬಿಟ್ಟೇನು ಎಂದು ಹೇಳಿಹೋಗುತ್ತಾನೆ. ನಂತರ ಎಲ್ಲರ ಪರಿಚಯವಾಗುತ್ತೆ. ಅಲ್ಲಿ ದಿನಾ ಬರುತ್ತಿದ್ದ ಸುನ್ನಾ, ಕಿಶನ, ಗೋವಿಂದ, ಸಂಜೆಯಾದಂತೆ 'ರಜನಿಗಂಧಾ' ಗೊಂಚಲುಗಳನ್ನು

ಮಾರಲು ಹಾಜರಾಗುವ ಲಕ್ಷ್ಮೀ, ಸಿನಿಮಾ ಹಾಡುಗಳನ್ನು ಹಾಡುತ್ತಾ ಭಿಕ್ಷೆ ಬೇಡುವ ಕುಂಟ ಜಾನಿ ಎಲ್ಲರೂ ಇವನ ಸ್ನೇಹಿತರಾಗಿರುತ್ತಾರೆ. ಅಭ್ಯಾಸವಾದಂತೆ ದಿನಗಳಿಕೆಯು ಹೆಚ್ಚಾಗುತ್ತದೆ. ಅವನ ಕನಸುಗಳು ಕಾರುಗಳಲ್ಲಿ, ಟ್ಯಾಕ್ಸಿಗಳಲ್ಲಿ ಗಲಾಟೆ ಮಾಡುತ್ತಾ, ಕೂಗುತ್ತಾ ಸ್ಕೂಲ್‌ಬಸ್ನಲ್ಲಿ ನೀಲಿ–ಬಿಳಿ ಯುನಿಫಾರ್ಮ್‌ತೊಟ್ಟು ಸ್ಕೂಲಿಗೆ ಹೋಗುವ ಮಕ್ಕಳಲ್ಲಿ ಅವರಲ್ಲಿ ಒಂದಾಗುವ ಕನಸು ಕಾಣುತ್ತಿದ್ದ. ಟ್ಯಾಕ್ಸಿ ಡ್ರೈವರ್‌ನಾಗುವ ಕನಸು, ಲಾರಿಯ ಹಿಂದೆ ಮೂಟೆಗಳ ಮೇಲೆ ಮಲಗಿ ಪ್ರಯಾಣ ಮಾಡುವ ಕನಸು, ಟೆಂಪೋ ನಡೆಸುವ ಕನಸು, ಕಾರುಗಳಲ್ಲಿ ಕೂತು ಸಂಗೀತ ಕೇಳುವ ಆರಾಮವಾಗಿ ಸಾಗುವ ಸಿನಿಮಾ ತಾರೆಯರನ್ನು ನೋಡಿ ತಾನು ಅವರಣತೆಯೇ ಆಗುವ ಕನಸನ್ನು ಕಾಣುತ್ತಿದ್ದ. ಆದರೆ ಕನಸುಗಳಿಗೂ ಅವನ ಮನಸ್ಸಿನಲ್ಲಿ ಸ್ಥಾನವಿರುತ್ತದ್ದು ಕೇವಲ ಸೆಕೆಂಡುಗಳು ಮಾತ್ರ –ದೀಪ ಮತ್ತೆ ಕೆಂಪಾಗುವವರೆಗೂ.

ದಿನ ರಾತ್ರಿ ಮನೆ ತಲುಪಿದ ತಕ್ಷಣ ಇವನ ಜೇಬು ಖಾಲಿಮಾಡಿ ಅಂದಿನ ಗಳಿಕೆಯನ್ನು ತೆಗೆದುಕೊಂಡು ಬಿಡುತ್ತಿದ್ದಳು. ಆ ಹಣವನ್ನೆಲ್ಲಾ ಒಂದು ಡಬ್ಬಿಯಲ್ಲಿ ಹಾಕುತ್ತಿದ್ದಳು. ಬೀಡಿಸೇದಿ ಬರ್ತಿಯೋ ಎಂದು ಬಯುತ್ತಿದ್ದಳು ಸುನ್ನೂ ಬೀಡಿ ಸೇದುತ್ತಾನೆ. ತಾಶ್ ಆಡಲು ಹೋಗುತ್ತಾನೆ. ಆದರೆ ಇವನು ಯಾವುದೇ ರೀತಿಯಲ್ಲಿ ಅಂತಹ ಕೆಲಸಗಳಿಗೆ ಕೈಹಾಕಿರಲಿಲ್ಲ. ಮನೆಗೆ ಓಡಿ ಹೋಗಬೇಕೆಂದು ಅನಿಸುತ್ತದೆ. ಅಂದೂ ಎಂದಿನಂತೆಯೇ ಮನೆಗೆ ದಾವಿಸಿದಾಗ ಬಣ್ಣಬಣ್ಣದ ಮಿಠಾಯಿ ತಂದಿದ್ದ ಜಿಲೇಬಿ ತಂದಿದ್ದ ಕಾಕಿಗೆ ಮಿರಮಿರನೆ ಹೊಳೆಯುವ ಗುಲಾಬಿ ಸೀರೆ ವಿಮಲಾ –ಮಾಲತಿಗೆ ಜರಿಲಂಗ ಇವನಿಗೆ ಪ್ಯಾಂಟು ಶರಟನ್ನು ತಂದಿದ್ದ ಕಾಕಿ ಇವನಿಗೆ ನಾಳೆ ಸ್ಕೂಲಿಗೆ ಸೇರಿಸುತ್ತೇನೆ ಬೆಳಿಗ್ಗೆ ೮ ಗಂಟೆಗೆ ಸರಿಯಾಗಿ ಬಟ್ಟೆ ಹಾಕಿಕೊಂಡು ತಯಾರಾಗು ಎಂಬುದಾಗಿ ಹೇಳಿರುತ್ತಾಳೆ. ಖುಷಿಯಿಂದ ಊಟಮಾಡಿ ಕನಸು ಕಾಣುತ್ತ ನಿದ್ದೆ ಮಾಡುತ್ತಾನೆ. ರಾತ್ರಿಯಲ್ಲಿ ಇದ್ದಕ್ಕಿದಂತೆ ಗಲಭೆಯಾಗಿ ಎದ್ದು ನೋಡಿದರೆ ಸಾಮಾನು ಎಲ್ಲಾ ಚೆಲ್ಲಾಪಿಲ್ಲಿಯಾಗಿರುತ್ತದೆ. ಕಾಕನನ್ನು ಎಳೆದುಕೊಂಡು ಹೋಗುತ್ತಾರೆ. ಕಾಕಿ ಜೋರಾಗಿ ಆಳುತ್ತಿರುತ್ತಾಳೆ ಪೋಲಿಸರಿಗೆ ಶಾಪಹಾಕುತ್ತಾಳೆ. ಹುಡುಗಿಯರು ಮೂಲೆಯಲ್ಲಿ ಕುತಿರುತ್ತಾರೆ ಜೋಪಡಿಯ ಸುತ್ತಲೂ ಜನ ಏನು ಮಾತಾಡದೇ ನಡೆದದ್ದನ್ನು ನೋಡುತ್ತಿದ್ದರು. ಕಾಕಿ ಬೆಳಗ್ಗೆ ಕಾಫಿ ಚಾಯ್ ತಂದು ಕುಕ್ಕಿದಳು ಬೆಳಗ್ಗೆ ಎದ್ದು ಕೆಲಸಕ್ಕೆ ನಡೆ ಇಲ್ಲದಿದ್ದರೆ ಎಲ್ಲರೂ ಉಪವಾಸ ಸಾಯೋದು ಎಂದು ಹೇಳುತ್ತಾಳೆ. ಮತ್ತೆ ಮುನ್ನ ನಿಧಾನವಾಗಿ ಕಪ್ಪು ಬಣ್ಣ ತಿರುಗಿದ ಹಳದಿ ಬಟ್ಟೆಯೊಡನೆ ಸಿಗ್ನಲಿನತ್ತ ಹೆಜ್ಜೆ ಹಾಕತೊಡಗಿದ. ಇದರಲ್ಲಿ ಬಡತನ ಹುಡುಗನ ಅಸ್ಸಾಹಯಕತೆಯನ್ನು ಕಾಣಬಹುದು.

ಕತೆ ಘಟನೆಯನ್ನು ಅನುಭವವನ್ನಾಗಿ ಮಾಡಬೇಕು ಜೊತೆಗೆ ಅದು 'ಧ್ವನಿಯನ್ನು ಪಡೆದುಕೊಂಡರೆ ಶ್ರೇಷ್ಠ ಕತೆಯಾಗುತ್ತದೆ. ಇಲ್ಲಿನ ಹಲವು ಕತೆಗಳಲ್ಲಿ ಮನಸ್ಸನ್ನು ಕಲಕುವ ಒಂದು ಘಟನೆ

ಅನುಭವವಾಗುವುದನ್ನು, ಅದರಿಂದ ಒಳ್ಳೆಯ ಕತೆಯಾಗುವುದನ್ನು ಕಾಣಬಹುದು. ಶ್ರೀಮಂತರ ಮನೆಯಲ್ಲಿ ಹುಟ್ಟಿದರೂ ಮಾನಸಿಕ ಬೆಳವಣಿಗೆ ಇಲ್ಲದೆ ಇತರರಿಗೆ ಹೊಣೆಯಾದ ಮಗು – ಬಡವರ ಮನೆಯಲ್ಲಿ ಹುಟ್ಟಿದರೂ ಆರೋಗ್ಯದಿಂದ ಉತ್ಸಾಹದಿಂದ ಓಡಾಡುವ ಮಗು ಇವರ ವೈದೃಶ್ಯವೇ ಸ್ವಲ್ಪ ಯೋಚನೆ ಮಾಡುವವರ ಮನಸ್ಸನ್ನೂ ಸೆಳೆಯುವಂತಹದು. ಈ ಘಟ್ಟದಲ್ಲಿ ಇದು ವಿಧಿಯ ವ್ಯಂಗ್ಯದ ಒಂದು ನಿದರ್ಶನ ಇದೊಂದು ಅನುಭವವಾಗುವುದು. ಶಶಿ ತಾನು ತಾಯಾಗಲಿರುವಳೆಂದು ತಿಳಿದ ಗಳಿಗೆಯಿಂದ ಅನುಭವಿಸುವ ಆನಂದ, ಸಂಭ್ರಮಗಳನ್ನು ಚಿತ್ರಿಸಿ, ಅವಳ ಪುಟ್ಟ ಲೋಕದಲ್ಲಿ ಎಲ್ಲರ ಸಂಭ್ರಮದ ಕೇಂದ್ರವಾಗಿ ನಿಲ್ಲಿಸಿ, ಅವಳನ್ನು ತಾಯಿಯಾಗಿ, ಸೃಷ್ಟಿಸಿ, ಅನಂತರ ಮಗುವಿನ ನಿಜವಾದ ಪರಿಸ್ಥಿತಿಯ ಅರಿವಾಗುತ್ತಲೇ ಅವಳ ಪುಟ್ಟ ಲೋಕದಲ್ಲಿ ಆಗುವ ಬದಲಾವಣೆಗಳನ್ನು ಗುರುತಿಸುತ್ತ, ಅವಳ ಒಳಲೋಕ ತೆರೆದುಕೊಳ್ಳುವಂತೆ ಮಾಡುವುದರಿಂದ ಬಿಕ್ಷುಕಿಯ ಮಗಳು – ಶ್ರೀಮಂತಳ ಮಗಳು ಇವರ ವೈದೃಶ್ಯ ಮನುಕುಲದ ಚಿತ್ರವಷ್ಟೇ ಆಗುವುದಿಲ್ಲ. ಕತೆ ಮುಂದುವರಿದಂತೆ, ತಾಯ್ತನದಿಂದ ತಾನು ನಿರೀಕ್ಷಿಸಿದ ಸಂಭ್ರಮ, ಸಂತೋಷಗಳ ಬದಲು ಅದೊಂದು ಹೊಣೆಯಾಗಿ, ಸವಾಲಾಗಿ, ಅವಳು ನೈತಿಕ ಆಯ್ಕೆಮಾಡಬೇಕಾಗಿ ಬರುತ್ತದೆ. ಶಶಿ ತನ್ನ ಭಾಗ್ಯದೊಡನೆ ರಶ್ಮಿಯ ಸ್ಥಿತಿಯನ್ನು ಹೋಲಿಸಿ ತನ್ನನ್ನು ಅವಳೊಂದಿಗೆ 'ಐಡೆಂಟಿಫೈ' ಮಾಡಿಕೊಂಡಾಗ ಅನುಭವ ಅರ್ಥಪೂರ್ಣವಾಗುತ್ತದೆ.



ಸಾಮಾನ್ಯವಾದ ಅನುಭವಗಳನ್ನು ಗಂಭೀರವಾಗಿ ರೂಪಿಸುವಲ್ಲಿ ಉಮಾರಾವ್ "ಪ್ರತಿಧ್ವನಿಗಳನ್ನು ಮಾರುವವರು" ಕತೆಯಲ್ಲಿ ಹೊಸ ಧ್ವನಿಯನ್ನು ಕೇಳಿಸುತ್ತಾರೆ. ಸರಳವೆಂದು ಕಾಣುವ ಒಂದು ತಮಾಷೆಯ ಘಟನೆಯ ನಿರೂಪಣೆ ಎಂದು ಕಾಣುವ ಈ ಕತೆಯಲ್ಲಿ ಒಂದು ಬಗೆಯ ಸಂಕೀರ್ಣತೆ ಇದೆ. ಮುಂಬಯಿಯ ಯಾಂತ್ರಿಕ ಜೀವನವನ್ನು ದೂರಮಾಡಿ ಹೊಸ ಮನುಷ್ಯನಾಗುವ ಆಸೆಯಿಂದ ಗಿರಿಧಾಮಕ್ಕೆ ಕತೆ ಹೇಳುವವನು ಬಂದಿರುತ್ತಾನೆ. 'ಇಕೋ ಪಾಯಿಂಟಗೆ' ಅವನು ಸಾಗುವಂತೆ ಕತೆಯ ಭಾಷೆ, ಚಿತ್ರಗಳು ಒಂದು ಗಂಭೀರವಾದ ಅನುಭವಕ್ಕೆ ಹೊಂದಿಕೊಳ್ಳುವ ಆವರಣವನ್ನು ಸೃಷ್ಟಿಸುತ್ತದೆ. ಮೇಲೆ ಶುಭ್ರ ನೀಲ ಆಕಾಶ, ಪಾದದಡಿಯಲ್ಲಿ ಸಾವಿರಾರು ಅಡಿಗಳ ಪ್ರಪಾತ, ಎದುರಿಗೆ ಬೆಟ್ಟ ಶ್ರೇಣಿ, ಈ ಆವರಣದಲ್ಲಿ ಕತೆ ಹೇಳುವವನು ಬೆರಗಿನಿಂದ ಉಸಿರು ಹಿಡಿದು ಪ್ರಕೃತಿಯ ಸೌಂದರ್ಯವನ್ನು ಕಣ್ಣುಗಳಲ್ಲಿ ತುಂಬಿಕೊಳ್ಳುತ್ತಾನೆ. ಇಳಿ ವಯಸ್ಸಿನಲ್ಲಿ ಪ್ರಕೃತಿಯಲ್ಲಿ ಲೀನವಾಗಿ ಕುಳಿತು ಕೊಳಕು ಪಂಚೆಯ, ಹರಕು ಕೋಟಿನ ಮನುಷ್ಯನನ್ನು ಕಂಡ ಮೆಚ್ಚಿಕೆಯೂ ಒಂದು ಸಮಾನ ಧರ್ಮ ಜೀವನವನ್ನು ಕಂಡ ಸಂತೃಪ್ತಿಯೂ ಉಂಟಾಗುತ್ತದೆ. ಕತ್ತೆಯ ಮುಕ್ತಾಯ ಕತೆ ಹೇಳುವವನ ನಿರೀಕ್ಷೆಯನ್ನು ಹುಸಿಯಾಗಿಸಿ ವ್ಯಂಗ್ಯದಿಂದ ಹಾಸ್ಯವನ್ನು ಉಂಟುಮಾಡುವುದಷ್ಟೆ ಅಲ್ಲ, ನಗರದ ಜೀವನವನ್ನು ದೂರ ಇಡಬೇಕೆಂದು ಹಂಬಲಿಸಿ ಬಂದ ಮನುಷ್ಯನಿಗೆ ನಿಸರ್ಗ

ಪ್ರೇಮದ ವೇಷಧರಿಸಿ ನಗರ ಜೀವನದ ವ್ಯಾಪಾರಿ ಮನೋಧರ್ಮ ಸುತ್ತಿಕೊಳ್ಳುವುದು. ಈ ವ್ಯಂಗ್ಯವನ್ನು ಗಾಢಗೊಳಿಸುತ್ತದೆ. ವ್ಯಾಪಾರಿ ಮೊದಲ ಕಂಡ ರೀತಿಗೂ ಅವನ ನಿಜವಾದ ಸ್ವರೂಪಕ್ಕೂ ಇರುವ ಅನಿರೀಕ್ಷಿತ ಭಿನ್ನವಾಗಿ ಕತೆಯ ಅನುಭವಕ್ಕೆ ಮತ್ತೊಂದು ಆಯಾಮವನ್ನು ಕೊಡುತ್ತದೆ. ಕತೆ ಹೇಳುವವನು ಯಾವ ತೀರ್ಪನ್ನೂ ಕೊಡದೆ ಅವನು ನನಗೆ ಮಾರಿದ್ದೇನು ಎಂದು ಅರ್ಥವಾಗದೆ ಇವನು ತಲೆ ಕೆರೆದುಕೊಳ್ಳುತ್ತಾ ನಿಧಾನವಾಗಿ ವಾಪಸು ಕಾಲು ಹಾಕುತ್ತಾನೆ. ಎಂದಷ್ಟು ತನ್ನ ಮುಂದೆ ನಿಂತ ಒಗಟನ್ನು ಕುರಿತು ಹೇಳುವುದು ಕತೆಯನ್ನು ಇನ್ನೂ ಪರಿಣಾಮಕಾರಿಯಾಗಿ ಮಾಡುತ್ತದೆ.

ಮಾದ ಹೆದರಿ, ಕಂಗೆಟ್ಟು, ತಲೆಮೇಲೆ ಕೈಹೊತ್ತು ಆಸ್ಪತ್ರೆಯ ಕಲ್ಲು ಕಟ್ಟಡದ ಮುಂದೆ ಕುಳಿತಿದ್ದ. ಮಾದನ ಪರಿಸ್ಥಿತಿಯಲ್ಲಿ ಬೇರೆಯಾರಿದ್ದರೂ ಹಾಗೇ ಮಾಡುತ್ತಿದ್ದರೆನ್ನುವುದು ನಿಜ. ಲಾರಿಯಿಂದ ಪೆಟ್ಟುತಿಂದ ಚೆನ್ನಿ ಅತಿ ರಕ್ತಸ್ರಾವದಿಂದಾಗಿ ವಾರ್ಡ್‌ನಲ್ಲಿ ಎಚ್ಚರವಿಲ್ಲದೆ ಮಲಗಿದ್ದಳು.

ಮಾದ ಕೀಶೇಹಳ್ಳಿಯ ರಂಗೇಗೌಡನ ಒಬ್ಬನೇ ಮಗ. ಚಿಕ್ಕ ತೆಂಗಿನ ತೋಟಕ್ಕೆ ಒಡೆಯನಾಗಿದ್ದ. ಪಕ್ಕದ ತೋಟದ ರಾಮೇಗೌಡನ ಳನೇ ಮಗಳು ಚೆನ್ನಿ ಇದರಲ್ಲಿ ಪ್ರೇಮ ವಿವಾಹ ಎಂಬಂತೆ ಕಥಾಸಂಕಲನವು ಶುರುವಾಗಿ ಕೊನೆಯಲ್ಲಿ ಪ್ರಶ್ನಾತೀತವಾಗಿರುವುದನ್ನು ನೋಡಬಹುದು. ಪ್ರೇಮ ಪ್ರಕರಣವು ಊರ ಹೊರಗಿನ ತೆಂಗಿನ ತೋಟ, ಟೆಂಟ್ ಸಿನಿಮಾ, ಪಕ್ಕದ ಊರಿನ ಜಾತ್ರೆಯಲ್ಲಿ ಇವೆಲ್ಲವೂ ಗೊತ್ತಾಗಿ ಊರಿನ ಹಿರಿಯರೆಲ್ಲಾ ಇವರ ಮದುವೆಗೆ ತಂದೆ-ತಾಯಿಯರನ್ನು ಒಪ್ಪಿಸುತ್ತಾರೆ. ಮಾದ-ಚೆನ್ನಿ ತಾವಿಬ್ಬರೂ ಗಂಡ-ಹೆಂಡಿರಾಗುವ ದಿನಕ್ಕೋಸ್ಕರ ಕಾತರದಿಂದ ಕಾಯುತ್ತಿರಬೇಕಾದರೆ ಲಾರಿಯಿಂದ ಹೊಡೆತ ತಿಂದ ಚೆನ್ನಿ ವಿಪರೀತ ಗಾಯಗೊಂದಿದ್ದಳು. ಬೆಂಗಳೂರಿಗೆ ಚಿಕಿತ್ಸೆಗಾಗಿ ಪಟೇಲರ ಕಾರಿನಲ್ಲಿ ಕರೆದೊಯ್ದರು. ಲೇಡಿ ಡಾಕ್ಟರ್ ಚೆನ್ನಿ ಕಡೆಯವರು ಯಾರು ಎಂದು ಕೇಳಿದಾಗ ಗಾಬರಿಗೊಳ್ಳುತ್ತಾರೆ. ಆದರೆ ಗಾಬರಿಯಾಗುವಂತಹ ವಿಷಯವೇನಿಲ್ಲ, ಮೂಳೆ ಮುರಿದಿವೆ. ಎರಡು ತಿಂಗಳಲ್ಲಿ ಸರಿ ಹೋಗುತ್ತೆ. ಈಗ ರಕ್ತ ಕೊಡಬೇಕಾಗುತ್ತದೆ. ನಿಮ್ಮಲ್ಲಿ ಯಾರಾದರೂ ಕೊಡಬಹುದು ಎಂದು ಕೇಳಿದಾಗ ಎಲ್ಲರ ರಕ್ತ ಪರೀಕ್ಷೆ ಮಾಡಿದಾಗ ಯಾರದೂ ಹೊಂದಿಕೆಯಾಗದೇ ಮಾದನ ರಕ್ತ ಮಾತ್ರ ಸರಿ ಹೋಗುತ್ತೆ. ಆಗ ಡಾಕ್ಟರು ಕರೆದೊಯ್ಯುತ್ತಾರೆ. ಆಗ ಮಾದನಿಗೆ ನೀನು ರಕ್ತ ಕೊಡುವುದರಿಂದ ಏನು ತೊಂದರೆ ಇಲ್ಲ. ಇನ್ನೂ ಆರೋಗ್ಯ ಸರಿ ಹೋಗುತ್ತೆ ಎಂದು ತಿಳಿಸುತ್ತಾರೆ. ಚೆನ್ನಿಗೆ ಎರಡು ತಿಂಗಳಲ್ಲಿ ಆರೋಗ್ಯ ಸರಿಯಾಗಿ ದಷ್ಟಪುಷ್ಟವಾಗಿ ಸರಿಯಾಗುತ್ತಾಳೆ ಮನೆಯಲ್ಲಿ ಮದುವೆಯ ಗದ್ದಲದಲ್ಲಿದ್ದಾಗ ದಿನವೆಲ್ಲಾ ಕಲ್ಲಿನಂತೆ ಕುಳಿತಿರುತ್ತಿದ್ದ. ಹೊಟ್ಟೆ ತುಂಬ ಊಟ-ತಿಂಡಿ ಕೂಡ ಮಾಡದೆ ಸವೆದು ಹೋಗುತ್ತಿದ್ದ. ಯಾರೊಂದಿಗೂ ಮಾತಾಡದೇ ಒಂಟಿತನದಿಂದ ಇರುತ್ತಿದ್ದ. ಈ ಸ್ಥಿತಿ ನೋಡಿ ಎಲ್ಲರಿಗೂ ಅಚ್ಚರಿ, ದುಗುಡ. ಮದುವೆ ಹದಿನೈದು ದಿನವಿದ್ದಾಗ

ಅಮ್ಮವರಿಗೆ ಈ ಲಗ್ನ ಬ್ಯಾಡ ಎಂದು ತಿಳಿಸುತ್ತಾನೆ. ಲಗ್ನ ಪತ್ರಿಕೆ ಬರ್ಸಿ ಊರಿನ ಜನರಿಗೆಲ್ಲಾ ಹೇಳಿದೀವಿ ಯಾಕೆ ಚೆನ್ನಿಯ ಮೇಲೆ ಏನಾದರೂ ಅನುಮಾನವ, ಇಲ್ಲವೇ ಬೇರೆ ಯಾರನ್ನಾದರೂ ಪ್ರೀತಿ ಮಾಡಿದೀಯಾ, ರೊಕ್ಕ-ಗಿಕ್ಕ ಇರುವವರನ್ನು ಮದುವೆ ಆಗಬೇಕಂತ ಕೇಳಿದಾಗ ಅವನ ಉತ್ತರ ನಾನು ಅವಳಿಗೆ ರಕ್ತ ಕೊಟ್ಟೀನಲ್ಲಾ ಅಂದಮೇಲೆ ನನ್ ರಕ್ತ ಅವಳ ಮೈಯಲ್ಲಿ ಹರೀತಾ ಆಯಿತಂತ ಆಯ್ತು. ಅಂದ್ಮೇಲೆ ಅವ್ಳು ನನ್ ತಂಗಿ ಸಮಾನ ಆದ್ಳಲ್ಲಾ ಅವಳನ್ನೆಂಗೆ ಲಗ್ನ ಆಗೋದು... ಎಂದವನೇ ಬಿಕ್ಕಿ ಬಿಕ್ಕಿ ಅಳತೊಡಗಿದ ಮಾದ.

ಇಲ್ಲಿನ ಎಲ್ಲ ಕತೆಗಳಲ್ಲಿ ಹೃದಯವಂತಿಕೆಯನ್ನು ನೋಡಬಹುದು. ಯಾವುದೇ ನೋವಿನ ಬಗ್ಗೆ ಗೌರವ ಇದೆ. ಮನುಷ್ಯರ ಬಗ್ಗೆ ಅವರು ಮನುಷ್ಯರೆಂದೇ ಕಾಳಜಿ ಇದೆ. ಇದನ್ನು 'ಕಾಲ' ಎಂಬ ಕತೆಯಲ್ಲಿ ಕಾಣಬಹುದು. ಈ ಕತೆ ರಾಜಪ್ಪನಿಗಾಗುವ ಅನ್ಯಾಯದ ಚಿತ್ರಣವಷ್ಟೆ ಅಲ್ಲ, ಹತ್ತಾರು ವರ್ಷ ಅರಮನೆಯ ಕಾವಲುಗಾರನಾಗಿ ಅವನ ವ್ಯಕ್ತಿತ್ವಕ್ಕೇನಾಗಿದೆ ಎಂಬುದರ ಚಿತ್ರಣವನ್ನು ಒಳಗೊಂಡಿದೆ.

ರಾಜಪ್ಪ ಅರಮನೆಯ ಕಾವಲುಗಾರನಾಗಿರುತ್ತಾನೆ. ಅವನು ಬಡವನು ಹಾಗೂ ಸೋಮಾರಿಯಾಗಿರುತ್ತಾನೆ. ರಾಜನಲ್ಲಿದ್ದ ಹಣದ ಬೊಗಸೆ ಖಾಲಿಯಾದಾಗ ಕಾವಲುಗಾರನನ್ನು ಕೆಲಸದಿಂದ ತೆಗೆಯುತ್ತಾರೆ. ಅವರು ಆ ಕೆಲಸದಲ್ಲಿಯೇ ತುಂಬಾ ಪರಿಣಿತಿಯನ್ನು ಹೊಂದಿರುತ್ತಾರೆ. ಕೆಲಸ ಹೋದ ನಂತರ ಜೀವನ ಸಾಗಿಸುವುದು ಕಷ್ಟಕರವಾಗಿರುತ್ತದೆ. ನಂತರ ಪಕ್ಕದ ಅಂಗಡಿಯ 'ಶ್ರೀ ಮಹದೇಶ್ವರ ಪ್ರಾವಿಜನ್ ಸ್ಟೋರ್'ನಲ್ಲಿ ಕೆಲಸಕ್ಕೆಂದು ಹೋದಾಗ ಅವರು ನಂಬಿಕೆಯಸ್ಥ ಮನುಷ್ಯ ಎಂದು ಈತ ತುಂಬಾ ದೃಢ ಮನಸ್ಸಿನಿಂದ ಕೆಲಸ ಮಾಡಬಹುದೆಂದು ನಿಶ್ಚಯಿಸಿದಾಗ ಅವನಲ್ಲಿ ಸೋಮಾರಿತನವು ಹೆಚ್ಚಿನದಾಗಿ ಬೆಳೆದಿರುತ್ತದೆ. ಸೂಕ್ಷ್ಮತೆಗಳಿರುದಿಲ್ಲ. ಕೆಲವು ದಿನಗಳ ನಂತರ ಅದನ್ನು ಕಳೆದುಕೊಳ್ಳುತ್ತಾನೆ. ರಾಜಪ್ಪನಿಗೆ ಯಾವ ಕೆಲಸದಲ್ಲಿಯೂ ದೃಢ ನಿರ್ಧಾರವಿರಲಿಲ್ಲ.

ರಾಜಪ್ಪನಿಗೆ ಕೆಲಸದಲ್ಲಿ ಆಸಕ್ತಿ ಇಲ್ಲದಿರುವುದನ್ನು ನೋಡಬಹುದು. ನಂತರ ಗಾಜಿನ ಬಂಗಲೆಯಲ್ಲಿ ಕೆಲಸಕ್ಕೆ ಸೇರಿದಾಗ ಹೂ ತೋಟವನ್ನು ನಾಶ ಮಾಡುತ್ತಾನೆ. ಅಲ್ಲಯೂ ಕೆಲಸವನ್ನು ಕಳೆದುಕೊಳ್ಳುತ್ತಾನೆ. ಕೊನೆಯಲ್ಲಿ ತನ್ನ ವೃತ್ತಿಯ ಕಾವಲುಗಾರನಾಗಿ ಕೆಲಸ ದೊರೆತಾಗಲೂ ಅವನ ವಯಸ್ಸು ಮೀತಿಮೀರಿರುತ್ತದೆ. ರಾಜಪ್ಪನು ಅದನ್ನು ಮಾಡಲು ಅರ್ಹನಾಗಿರುವುದಿಲ್ಲ. ಕಾಲ ಮನುಷ್ಯನಿಗೆ ಯಾವಾಗಲೂ ಒಂದೇ ರೀತಿಯಲ್ಲಿ ಇರುವುದಿಲ್ಲ. ಸಮಯದಿಂದ ಸಮಯಕ್ಕೆ ಬದಲಾವಣೆಯನ್ನು ಹೊಂದಿರುತ್ತದೆ. ಯಾವುದೇ ಕೆಲಸವನ್ನು ನಿಷ್ಠೆಯಿಂದ ಮಾಡಿದಾಗ ಮಾತ್ರ ಅದು ಚಿರಸ್ಥಾಯಿಯಾಗಿ ಉಳಿಯಲು ಸಾಧ್ಯವಾಗುತ್ತದೆ.

'ಕಾಲ' ಎಂಬುದರಲ್ಲಿ ಮನುಷ್ಯ ಒಂದೇ ರೀತಿಯಲ್ಲಿ ಇರುವುದಿಲ್ಲ. ಪರಿಸ್ಥಿತಿಯಿಂದ ಪರಿಸ್ಥಿತಿಗೆ ಬದಲಾವಣೆಯ ಗುಣವನ್ನು ಹೊಂದಿರುವುದನ್ನು ನೋಡುವುದು ಆಗ ಉನ್ನತ ಮನುಷ್ಯನಾಗಲು ಸಾಧ್ಯವಿರುತ್ತದೆ. ಯಾವುದೇ ಕೆಲಸದಲ್ಲಿ ನಿಷ್ಠೆಯನ್ನು ಹೊಂದಿರಬೇಕು. ಬೇಜವಬ್ದಾರಿಯನ್ನು ಹೊಂದಿದಾಗ ಯಾವುದನ್ನು ಪಡೆಯಲು ಸಾಧ್ಯವಿಲ್ಲ ಎಂಬುದು ತಿಳಿಯುತ್ತದೆ.

ರಾಜಪ್ಪನ ನಿಸ್ಸಾಹಯಕದಿಂದ ಎಲ್ಲ ರೀತಿಯ ಕೆಲಸವನ್ನು ಕಳೆದುಕೊಳ್ಳುತ್ತಾನೆ. ಕೊನೆಗೆ ಯಾವುದೇ ರೀತಿಯ ಕೆಲಸವಿಲ್ಲದೆ ತನ್ನ ಜೀವನವನ್ನು ಸಾಗಿಸುವುದಕ್ಕೆ ಕಷ್ಟದಾಯಕವಾಗಿರುವುದನ್ನು ನೋಡಬಹುದು. ಈ ರೀತಿಯ ಹೊಸ ಚಿತ್ರಣವನ್ನು ಉಮಾರಾವ್‌ರವರ ಕತೆಗಳಲ್ಲಿ ಕಾಣಬಹುದು. ಮನುಷ್ಯನ ಹಲವಾರು ರೀತಿಯ ಸಂಬಂಧಗಳು ಹೊಸ ರೀತಿಯಲ್ಲಿ ಪರಿಚಯವಾಗುವುದು ಇವರ ಕತೆಗಳಲ್ಲಿ ನೋಡಬಹುದು. ಹೃದಯವಂತಿಕೆಯು ಎಂಬುದನ್ನು ಮಾದನ ಪ್ರಶ್ನೆ ಎಂಬುದರಲ್ಲಿ ನೋಡಬಹುದು. ಹೀಗೆ ಒಂದೊಂದರಲ್ಲಿ ಒಂದೊಂದು ರೀತಿಯ ಸಮಸ್ಯೆಗಳನ್ನು ಇವರ ಕತೆಗಳಲ್ಲಿ ಕಾಣಲಾಗಿದೆ.

ವರ್ಷಗಳ ಹಿಂದೆ ನಾನು ಮೊದಲ ಸಲ ಕೇಶವನನ್ನು ನೋಡಿದ್ದು ಅನಾಥಾಶ್ರಮದಲ್ಲಿ ಕೇಶವನಿಗೆ ಹೆಚ್ಚಿನದಾಗಿ ಸ್ನೇಹಿತರಿರಲಿಲ್ಲ. ಆಕಸ್ಮಿಕ ಮನೆ ಕುಸಿತದಲ್ಲಿ ಐದು ವರ್ಷಗಳ ಹಿಂದೆ ತಂದೆ-ತಾಯಿಗಳು ಪ್ರಾಣ ಬಿಟ್ಟರು. ಆದ್ದರಿಂದ ಒಬ್ಬಂಟಿಯಾಗಿದ್ದರಿಂದ ಅನಾಥಾಶ್ರಮದಲ್ಲಿರುತ್ತಾನೆ. ಶೀಲಾಜಿಯವರು ಅಲ್ಲಿ ಪಾಠ ಕಲಿಸಲು ಹೋಗುತ್ತಿದ್ದರು. ಅವರಲ್ಲಿ ಹೊಸ ಮುಖ ಕಂಡಾಗ ಪರಿಚಯಿಸಿದಾಗ ಮುರುಕಲು ಹಲ್ಲಿನವನಾದ ಕೇಶವ ಪರಿಚಯವಾಗುತ್ತಾನೆ. ವರ್ಕ್‌ಶಾಪ್‌ನಲ್ಲಿ ಕೆಲಸವನ್ನು ಕೊಡಿಸುತ್ತಾರೆ. ಅದನ್ನು ಬಿಟ್ಟು ಮತ್ತೆ ಶೀಲಾಜಿಯವರು ಅಲ್ಲಿ ಪಾಠ ಕಲಿಸಲು ಹೋಗುತ್ತಿದ್ದರು ಅವರಲ್ಲಿ ಹೊಸ ಮುಖ ಕಂಡಾಗ ಪರಿಚಯಿಸಿದಾಗ ಮುರಕಲು ಹಲ್ಲಿನವನಾದ ಕೇಶವ ಪರಿಚಯವಾಗುತ್ತಾನೆ. ವರ್ಕ್‌ಶಾಪ್‌ನಲ್ಲಿ ಕೆಲಸವನ್ನು ಕೊಡಿಸುತ್ತಾರೆ. ಅದನ್ನು ಬಿಟ್ಟು ಮತ್ತೆ ಶೀಲಾಜಿಯವರಿಗೆ ಮನೆಗೆ ಬಂದು ಭೇಟಿಯಾದಾಗ ಕೆಲಸವನ್ನು ಬಿಟ್ಟ ಸುದ್ದಿಯನ್ನು ತಿಳಿಸುತ್ತಾನೆ. ನೌಕರಿ ಹುಡುಕಲು ಪ್ರಯತ್ನ ಮಾಡಿದಾಗ ಸ್ವಲ್ಪ ದಿನದ ಕಾಲ ಪಕ್ಕದ ಮನೆಯ ಮಿಸಸ್ ಮೆಹ್ರಾ ಮನೆಯಲ್ಲಿ ಕೆಲಸ ಮಾಡಲು ತಯಾರು ಇದ್ದಾನೆಯೇ ಎಂಬುದಾಗಿ ತಿಳಿದಾಗ ಕಾತುರದಿಂದ ಒಪ್ಪಿಕೊಂಡ.

ಜೀವನದಲ್ಲಿ ಮನುಷ್ಯನಿಗೆ ಉನ್ನತವಾದ ಜೀವನ ನಡೆಸಲು ನಂಬಿಕೆ ಎಂಬುದು ಮುಖ್ಯವಾದ ವಿಷಯವಾಗಿರುತ್ತದೆ. ಮಿಸಸ್ ಮೆಹ್ರಾ ಅವರಿಗೆ ನಂಬಿಕೆಯನ್ನು ಪಡೆಯಲು ಕೇಶವನಿಂದ ಸ್ವಲ್ಪ ದಿನಗಳ ಅವಕಾಶ ಬೇಕಾಯಿತು. ಅವರ ನಂಬಿಕೆಗೆ ತಕ್ಕಂತೆ ಬದ್ಧವಾಗಿರುತ್ತಾನೆ. ಎಲ್ಲ ಕೆಲಸದಲ್ಲಿಯೂ ಪರಿಣಿತಿಯನ್ನು ಪಡೆದುಕೊಂಡಿರುತ್ತಾನೆ. ಶೀಲಾಜಿಯವರು ಮೆಹ್ರಾ ಅವರ ಮನೆಗೆ ಹೋಗಿ

ಭೇಟಿಯಾಗಿ ತುಂಬಾ ನಂಬಿಕೆಯುಳ್ಳ ಮನುಷ್ಯನಾಗಿದ್ದಾನೆ ಎಂಬ ವಿಷಯವನ್ನು ತಿಳಿಸುತ್ತಾಳೆ. ಕೊನೆಗೆ ಮಾರನೆಯ ದಿನವೇ ಭೇಟಿಯಾದಾಗ ತುಂಬಾ ಬೇಸರದಿಂದ ಭೇಟಿಯಾಗುತ್ತಾಳೆ. ವಿಚಾರಿಸಿದಾಗ ತುಂಬಾ ಬೆಲೆ ಬಾಳುವ ಉಂಗುರವು ಕಳೆದುಹೋದ ಸುದ್ದಿಯನ್ನು ಹೇಳುತ್ತಾಳೆ. ಕೇಶವನೇ ಅದನ್ನು ಪಡೆದಿರಬಹುದು ಎಂಬುದಾಗಿ ತಿಳಿಸುತ್ತಾಳೆ. ಶೀಲಾಜಿ ಮೆಹ್ರಾರವರು ಅನೇಕ ರೀತಿಯ ಆಸೆ–ಆಕಾಂಕ್ಷೆಗಳಿಂದ ಅನೇಕ ರೀತಿಯ ಬೆದರಿಕೆಗಳಿಂದ ಕೇಳಿದಾಗ ಯಾವುದೇ ರೀತಿಯಲ್ಲಿಯೂ ಅದನ್ನು ಪಡೆದಿಲ್ಲವೆಂಬ ಸುದ್ದಿಯನ್ನು ಹೇಳುತ್ತಾನೆ. ಕೊನೆಗೆ ಮನೆಯನ್ನು ಬಿಟ್ಟು ಅಪರಾಧವನ್ನು ತಡೆಯಲಾರದೆ ಹೋಗಿರುತ್ತಾನೆ. ಕೊನೆಗೆ ಶೀಲಾಜಿಯವರ ಬಳಿ ಬಂದು ಕೋಲ್ಡ್‌ಕ್ರಿಮ್ ಬಾಟಲಿನಲ್ಲಿ ಉಂಗುರ ದೊರೆತಿದೆ ಎಂಬುದಾಗಿ ತಿಳಿಸುತ್ತಾಳೆ. ಆದರೆ ಒಂದು ಸಲ ಅಪರಾಧ ಹೊರೆಸಿರುವುದನ್ನು ಬಿಡಿಸಿಕೊಳ್ಳಲು ತುಂಬಾ ಕಷ್ಟವಾಗುತ್ತದೆ. ಮೆಹ್ರಾರವರು ಕೇಶವನು ಅಪರಾಧಿಯಲ್ಲ ಎಂಬ ಸುದ್ದಿಯನ್ನು ತಿಳಿಸಲು ಕಾತುರದಿಂದ ಕಾಯುತ್ತಿರುತ್ತಾಳೆ. ಅವನ ಭೇಟಿಯಾಗಲು ಸಾಧ್ಯವಾಗುವುದಿಲ್ಲ. ಮನುಷ್ಯನ ಬದುಕಿಗೆ ನಂಬಿಕೆಯೂ ತುಂಬಾ ಪ್ರಮುಖವಾದದ್ದು ಎಂಬುದಾಗಿ ತಿಳಿಯುತ್ತದೆ.

'ಉರಿ' ಎಂಬ ಕತೆಯಲ್ಲಿ ಸಮಕಾಲೀನ ಸಮಾಜದ ದುಷ್ಟ ಪ್ರವೃತ್ತಿ ಅದರಲ್ಲಿ ಬಲಿಯಾಗುವ ಹೆಣ್ಣಿನ ಬಗ್ಗೆ ಅನುಕಂಪವು ಕಂಡುಬರುತ್ತದೆ. ಇದರಲ್ಲಿ ಅತ್ತೆ–ಸೊಸೆ ಅವರ ಸಂಬಂಧವನ್ನು ನೋಡಬಹುದು. ಅಪವಾದವನ್ನು ಅತ್ತೆಯು ಬುದ್ಧಿವಂತಿಕೆಯಿಂದ ಸೊಸೆಯ ಮೇಲೆ ಹೊರಿಸುತ್ತಾಳೆ. ಗಂಡನ ಪಾತ್ರವು ನಿಶಬ್ಧತೆಯಿಂದ ಕೂಡಿರುತ್ತದೆ. ಕತೆಯಲ್ಲಿ ಹೆಣ್ಣು ಹೆಣ್ಣನ್ನು ಅರ್ಥಮಾಡಿಕೊಳ್ಳುವುದಿಲ್ಲ ಎಂಬುದು ತಿಳಿಯುತ್ತದೆ. ಅತ್ತೆಯು ಸೊಸೆಯ ಮನೆಯಿಂದ ವರದಕ್ಷಿಣೆಯ ಬೇಡಿಕೆಯನ್ನು ನೋಡಬಹುದು ಇದರಲ್ಲಿ ಯಾವುದೇ ರೀತಿಯಲ್ಲಿ ಸಮಾಧಾನವೂ ಸಿಗುವುದಿಲ್ಲ. ಐಶ್ವರ್ಯವು ಮುಖ್ಯ ಎನ್ನುವುದು ಅತ್ತೆಯ ಮುಖ್ಯ ವಾದವಾಗಿರುತ್ತದೆ. ಜಾರಬೆನ್ ಅವರ ತೋರಪಡಿಕೆಯನ್ನು ನೋಡಬಹುದು. ಅವರಿಂದ ಮತ್ತಷ್ಟು ಆಸೆಯನ್ನು ಹೊಂದುತ್ತಾಳೆ. ಸೊಸೆಗೆ ನೆಮ್ಮದಿಯುತವಾದ ಜೀವನವನ್ನು ಕೊಡುತ್ತಾಳೆ. ಗಂಡ ಸಹ ಹೆಂಡತಿಯನ್ನು ಅರ್ಥಮಾಡಿಕೊಳ್ಳುವುದಿಲ್ಲ. ಹೆಣ್ಣಿನ ಈಗಿನ ಕಾಲದ ಪರಿಸ್ಥಿತಿಯನ್ನು ಕತೆಯಲ್ಲಿ ಚಿತಿಸಿದ್ದಾರೆ. ಹೆಣ್ಣು ಸಮಸ್ಯೆಯಲ್ಲಿರುವುದನ್ನು ನೋಡಬಹುದು. ತಂದೆಯವರು ಮದುವೆಯಾದ ನಂತರವೂ ಸಹಾಯವನ್ನು ಮಾಡಲು ಅವರವರ ಸಮಸ್ಯೆಗಳೇ ಹೆಚ್ಚಾಗಿರುವುದನ್ನು ನೋಡಬಹುದು. ಅದರಲ್ಲಿಯೂ ಬಡತನದಿಂದ ಕೂಡಿರುವುದರಿಂದ ಮದುವೆಯಾದ ನಂತರ ಒಂದು ಜವಾಬ್ದಾರಿಯು ಕಡಿಮೆಯಾಗಿದೆ ಎಂದು ಭಾವಿಸುತ್ತಾರೆ. ಅದರಲ್ಲಿ ಅವರು ಬೇಡಿಕೊಳ್ಳುವುದು ಒಂದೆರಡು ಆದರೆ ಬಗೆಹರಿಸಬಹುದು. ಪ್ರತಿ ತಿಂಗಳು ಬೇಡಿಕೆಯನ್ನು ಹೊತ್ತರೆ ಅವರ ಜೀವನವು ಸಾಗಿಸುವುದೇ ಕಷ್ಟಕರವಾಗಿರುತ್ತದೆ. ಬೇಡಿಕೆಗಳ ಒತ್ತಾಯವೇ ಅತ್ತೆಯ

ತಕರಾರಾಗಿರುತ್ತದೆ. ಯಾವುದೇ ರೀತಿಯಲ್ಲಿಯೂ ಸೊಸೆಯಲ್ಲಿ ಸಮಾಧಾನವನ್ನು ತೋರಿಸುವುದಿಲ್ಲ ಪ್ರತಿದಿನವೂ ಬೇಡಿಕೆಯನ್ನು ಹೊಂದಿರುತ್ತಾಳೆ. ಸ್ಮಿತಾ ತನ್ನ ಜೀವನದಲ್ಲಿ ಅತ್ತೆಯು ಮಾಡಿದ ಕೆಲಸಕ್ಕೆ ಅಪವಾದವು ತನ್ನ ಮೇಲೆ ಹೊರೆಯುತ್ತಾರೆ. ಆದರೆ ಅದು ತಾನು ಮಾಡಿಲ್ಲ ಎನ್ನುವ ಮಾತು ಆಡುವುದಕ್ಕೆ ಸಹ ಅವಕಾಶವೂ ಕೊಡದಿರುವುದನ್ನು ನೋಡಬಹುದು.

ಹೆಣ್ಣಿಗೆ ಹೆಣ್ಣೇ ಶತ್ರು ಎಂಬುದನ್ನು ಕತೆಯಲ್ಲಿ ನೋಡಬಹುದು. ಸೊಸೆಯನ್ನು ಪ್ರೀತಿಯಿಂದ ನೋಡಿದಾಗ ಅದರ ಹಿಂದೆ ಗಾಢವಾದ ಒಂದು ಸಮಸ್ಯೆಯಿದೆ ಎಂದು ಅರಿವಾಗುತ್ತದೆ. ಹಾಗಂತ ಎಲ್ಲರ ಜೀವನದಲ್ಲೂ ಈ ವ್ಯಕ್ತಿತ್ವವನ್ನು ಅರಿತು ನಿಜ ಜೀವನದಲ್ಲಿ ಹುಡುಕಲು ಸಾಧ್ಯವಾಗುವುದಿಲ್ಲ. ಅನೇಕ ರೀತಿಯಲ್ಲಿ ಹೆಣ್ಣು ಒಂದಲ್ಲಾ ಒಂದು ಸಮಸ್ಯೆಯಿಂದ ಕೂಡಿರುವುದನ್ನು ನೋಡಬಹುದು. ಇದರಲ್ಲಿ ಗಂಡನ, ತಾಯಿಯ ಪಾತ್ರವು ಹೆಚ್ಚಾಗಿ ಕಂಡುಬರುತ್ತದೆ. ಗಂಡ ಯಾವುದೇ ರೀತಿಯಲ್ಲಿಯೂ ಹೆಂಡತಿಗೆ ಸರಿಯಾದ ರೀತಿಯಲ್ಲಿ ಪ್ರತಿಕ್ರಿಯೆಯನ್ನು ಕೊಡುವುದಿಲ್ಲ.

ಹಲವಾರು ರೀತಿಯ ಸಮಸ್ಯೆಗಳನ್ನು ಹೆಣ್ಣು ಹೊಂದಿರುತ್ತಾಳೆ ಎಂಬುದನ್ನು ನೋಡಬಹುದು. ಅತ್ತೆ–ಸೊಸೆಯವರು ಹೊಂದಾಣಿಕೆಯಿಲ್ಲದ ಬಾಳು ಚಿತಿಸಿರುವುದನ್ನು ನೋಡಬಹುದು. ಸೊಸೆಯ ಪ್ರಾಣವನ್ನು ಕಳೆದುಕೊಳ್ಳುವಂತಹ ಘಟನೆಗೆ ಕಾರಣವಾಗುವುದು ಅತ್ತೆಯಾಗಿರುತ್ತಾರೆ. ಆದರೆ ಅದಕ್ಕೆ ಕಾರಣ ನಾನಲ್ಲ. ಆ ಕೆಲಸ ಏಕೆ ಮಾಡಿಬಿಟ್ಟಳು ನನ್ನ ಸೊಸೆ ಎಂಬುದಾಗಿ ಆಗ ಕಿರುಚಾಡುತ್ತಾಳೆ. ಈ ಅಪವಾದವನ್ನು ನಾನಲ್ಲ ಮಾಡಿದ್ದು ಎಂಬ ಮಾತು ಹೇಳಬೇಕು ಎನ್ನುವುದರಲ್ಲಿ ಸೊಸೆಯು ಆ ಪರಿಸ್ಥಿತಿಯಲ್ಲಿ ಇರುವುದಿಲ್ಲ. ಕತೆಯಲ್ಲಿ ಕೆಲವೊಂದುದರಲ್ಲಿ ಹೆಣ್ಣಿಗೆ ಆಧುನಿಕತೆಯ ಜೀವನವನ್ನು ಕೊಟ್ಟರೆ ಕೆಲವೊಂದು ಕತೆಗಳಲ್ಲಿ ಹೆಣ್ಣಿನ ಸಮಸ್ಯೆಯನ್ನು ಚಿತ್ರಿಸಿದ್ದಾರೆ. ಎಲ್ಲಾ ಕತೆಗಳು ಒಂದರಿಂದ ಇನ್ನೊಂದಕ್ಕೆ ವಿಭಿನ್ನತೆ ಹಾಗೂ ಶ್ರೇಷ್ಟತೆ ಹೊಂದಿರುವುದನ್ನು ನೋಡಬಹುದು. ಅವರು ಕಥೆಯನ್ನು ಹೆಣೆದಿರುವುದೇ ತುಂಬಾ ಉತ್ತಮ ಶೈಲಿಯಲ್ಲಿರುವುದನ್ನು ನೋಡಬಹುದು. ಹೆಣ್ಣಿನ ಸಮಸ್ಯೆಗಳನ್ನು ಸಹ ಮತ್ತು ಇವರ ಕತೆಯಲ್ಲಿ ಚಿತ್ರೀಕರಣವನ್ನು ನೋಡಬಹುದು. ಸಮಾಜದಲ್ಲಿ ಹೆಣ್ಣು ಯಾವ ಯಾವ ರೀತಿಯಲ್ಲಿ ಇದ್ದಾಳೆ ಅವಳ ಸ್ಥಾನಮಾನ ಯಾವ ಹಂತದಲ್ಲಿದೆ ಎಂಬುದನ್ನು ಇವರ ಕಥೆಗಳಲ್ಲಿ ನೋಡಬಹುದು.

'ಸಿಂಧು'ವಿನ ಕತೆಯ ಕೇಂದ್ರ ಪಾತ್ರ ಸಿಂಧು. ಪರಿಪೂರ್ಣ ಮುಗ್ಧತೆಯ ಪುತ್ಥಳಿ ಏನಲ್ಲ. ಸನ್ನಿವೇಶ ಸ್ವಭಾವದ ದೌರ್ಬಲ್ಯದ ಬಾಳನ್ನು ಲೇಖಕಿ ಚಿತ್ರಿಸಿದ್ದಾರೆ. ಸಿಂಧು ಅವರ ಕುಟುಂಬ ತುಂಬಾ ಬಡತನದಿಂದ ಕೂಡಿದ ಕುಟುಂಬವಾಗಿರುತ್ತದೆ. ಈಗಿನ ಸಮಾಜದಲ್ಲಿ ಮನುಷ್ಯ ತನ್ನ ಪರಿಸ್ಥಿತಿಗೆ ಅನುಗುಣವಾಗಿ ಯಾವ ರೀತಿಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಾನೆಂಬುದನ್ನು ತಿಳಿಯುತ್ತದೆ. ತಾನು ಬದಲಾವಣೆಯನ್ನು ಹೊಂದಲು ಪರಿಸ್ಥಿತಿಯೇ ಮುಖ್ಯ ಕಾರಣವಾಗಿರುತ್ತದೆ ಎಂಬುದಾಗಿ ಹೇಳಲಾಗಿದೆ.

ತಬ್ಬಲಿಯಾದ ಸಿಂಧು ತಂದೆಯನ್ನು ಮಾತ್ರ ಪಡೆದಿರುತ್ತಾಳೆ. ಇವರ ಜೀವನವೂ ತುಂಬಾ ಕಷ್ಟಕರದಿಂದ ಕೂಡಿರುತ್ತದೆ. ತಂದೆಯು ಅನಾರೋಗ್ಯದಿಂದ ಇರುತ್ತಾರೆ. ಆದ್ದರಿಂದ ತನ್ನ ಜೀವನವನ್ನು ಮಾಡಲು ಯಾವುದೇ ರೀತಿಯ ಕೆಲಸವನ್ನು ಮಾಡಲು ಮುಂದಾಗದೆ ಕಳ್ಳತನದಲ್ಲಿ ತೊಡಗಿರುವುದನ್ನು ನೋಡಬಹುದು. ಹೇಗಾದರೂ ಮಾಡಿ ತನ್ನ ಜೀವನವನ್ನು ಸಾಗಿಸಬೇಕು ಎನ್ನುವುದು ಅವರ ತಂದೆಯ ಆರೋಗ್ಯ ಸರಿಮಾಡಬೇಕು ಎನ್ನುವುದು ಅವಳ ಬಯಕೆಯಾಗಿರುತ್ತದೆ. ಆದ್ದರಿಂದ ಅವರ ಸ್ನೇಹಿತರು ಒಂದು ಮನೆಯಲ್ಲಿ ಕೆಲಸಕ್ಕೆ ಸೇರಿಸಿದರಿಂದ ಒಂದೆರಡು ದಿನ ಚೆನ್ನಾಗಿ ಕೆಲಸ ಮಾಡಿ ನಂತರ ತಾನು ಕಳ್ಳತನದ ಕೆಲಸದಲ್ಲಿ ನಿರತಳಾಗುತ್ತಾಳೆ. ಇದನ್ನು ಅರಿತ ಮನೆಯ ಒಡತಿ ಆಕೆಯನ್ನು ಕೆಲಸದಿಂದ ಬಿಡಿಸುತ್ತಾರೆ. ತನ್ನ ಜೀವನವನ್ನು ಸಾಗಿಸುವುದು ಕಷ್ಟಕರ ಎಂದು ಅರಿತು ಅದನ್ನು ಪರಿಹಾರ ಮಾಡಲು ಕಳ್ಳತನವೇ ಎಂದು ಭಾವಿಸುತ್ತಾಳೆ. ಅಲ್ಲದೇ ಇದನ್ನು ಮಾಡಬೇಕು ಮಾಡಬಾರದು ಎಂಬ ತೀರ್ಪನ್ನು ಕೊಡುವವರು ಯಾರು ಇರಲಿಲ್ಲ. ಅಲ್ಲದೆ ಸಮಸ್ಯೆಯಿಂದ ಕೂಡಿದರಿಂದ ಅದನ್ನು ಪರಿಹಾರ ಮಾಡುವುದೇ ಅವಳ ಕೆಲಸವಾಗಿತ್ತು. ಆ ಮನೆಯನ್ನು ಬಿಟ್ಟು ಇನ್ನೊಂದು ಮನೆಯಲ್ಲಿ ಕೆಲಸಕ್ಕೆ ಹೋದಾಗ ಅಲ್ಲಿಯೂ ಸಹ ಕಳ್ಳತನವನ್ನು ಮಾಡಿ ಎಲ್ಲಾ ರೀತಯಲ್ಲಿಯೂ ಕೆಲಸವನ್ನು ಕಳೆದುಕೊಳ್ಳುತ್ತಾಳೆ. ಅನೇಕ ಸಲ ಪೊಲೀಸರ ಕೈಗೆ ಸಿಕ್ಕಿ ಬೀಳುತ್ತಾಳೆ. ಅನೇಕ ಸಲ ಸೆರೆಮನೆಗೆ ಹೋಗಿ ಬರುತ್ತಾಳೆ. ಇವಳ ಜೀವನವೇ ಕಳ್ಳತನದಲ್ಲಿ ಸಾಗುತ್ತಿರುತ್ತದೆ. ಅದನ್ನು ಬದಲಾಯಿಸಲು ಯಾವ ರೀತಿ ಎಂಬುದೇ ಅರಿವಾಗುವುದಿಲ್ಲ. ಹಲವಾರು ದಿನಗಳ ನಂತರ ಶೀಲಾತಾಯಿ ಎಂಬುವರ ಪರಿಚಯವಾಗುತ್ತದೆ. ಅವಳ ಬದುಕನ್ನು ಕುರಿತು ವಿಚಾರಿಸುತ್ತಾಳೆ. ಅದಕ್ಕೆ ಪರಿಹಾರವನ್ನು ಹುಡುಕುತ್ತಾಳೆ. ಅಲ್ಲದೇ ಸಿಂಧುಗೆ ಕೆಲಸವು ಇಲ್ಲದರಿಂದ ಹೀಗೆ ಆಗಿದ್ದಾಳೆ. ಕೆಲಸವನ್ನು ಕೊಡಿಸುತ್ತೇನೆ ಹೊಸ ಜೀವನವನ್ನು ಆರಂಭಿಸು ಎಂಬುದಾಗಿ ಹೊಸ ಜೀವನದ ದಾರಿ ತೋರಿಸುವರೇ ಶೀಲಾತಾಯಿಯವರು ಜೀವನದ ಹಾದಿಯನ್ನು ತಿಳಿಸಿಕೊಡುತ್ತಾರೆ. ತಂದೆಯ ನಿಧನದ ನಂತರ 'ಸಿಂಧೂ'ಳನ್ನು ಅನಾಥಾಶ್ರಮಕ್ಕೆ ಸೇರಿಸುತ್ತಾಳೆ. ಅಲ್ಲಿ ಒಳ್ಳೆಯ ಕೆಲಸದಲ್ಲಿ ನಿರತಳಾಗಿ ತನ್ನ ಜೀವನವನ್ನು ಮುಂದುವರೆಸುತ್ತಾಳೆ. ಆದರೂ ಹಿಂದೆ ಪಡೆದಿದ್ದ ಕಳ್ಳತನ ಕೆಲಸದಲ್ಲಿ ತಾನು ಕಳ್ಳ ಎಂಬ ಹೆಸರು ಜೀವನ ಪರ್ಯಂತ ಹಾಗೆಯೇ ಉಳಿಯುತ್ತದೆ. ಬದಲಾವಣೆಯಾದ ನಂತರ ಅಂಗಡಿಗೆ ಹೋದ ಸಂದರ್ಭದಲ್ಲಿ ಒಂದು ಕಳ್ಳತನವು ನಡೆಯುತ್ತದೆ. ಆದರೆ ಸಿಂಧೂ ತಾನು ತಪ್ಪಿತಸ್ಥ ಅಲ್ಲದಿದ್ದರೂ ಈಕೆಯನ್ನು ಎಳೆದು ಒಯ್ಯುತ್ತಾರೆ. ನಾನು ಕಳ್ಳಿ ಅಲ್ಲ ಎಂದು ಹೇಳಿದರೂ ಯಾರೂ ನಂಬುವ ಪರಿಸ್ಥಿತಿಯಲ್ಲಿ ಇರಲಿಲ್ಲ.

ಜೀವನದಲ್ಲಿ ಒಂದು ಸಲ ಕೆಟ್ಟ ರೀತಿಯ ಮುದ್ರೆಯನ್ನು ಪಡೆದಾಗ ನಂತರ ಹಲವಾರು ರೀತಿಯಲ್ಲಿ ಒಳ್ಳೆಯವನಾಗಿದ್ದರೂ ಒಂದಲ್ಲಾ ಒಂದು ಸಲ ಹಿಂದಿನ ಮುದ್ರೆಯನ್ನು ಪಡೆಯಬಹುದಾಗಿದೆ.

ಮನುಷ್ಯನು ಒಳ್ಳೆಯ ರೀತಿಯಲ್ಲಿ ಜೀವನವನ್ನು ನಡೆಸಬೇಕಾದರೆ ಅವರ ನಡವಳಿಕೆಯು ಮುಖ್ಯ ಎಂಬುದಾಗಿ ತಿಳಿಯುತ್ತದೆ.

ಉಮಾರಾವ್‌ರವರ ಕಥೆಗಳಲ್ಲಿ ಹೆಚ್ಚಿನದಾಗಿ ಮುಂಬೈ ಪರಿಸರವನ್ನು ಚಿತ್ರಿಸಿದ್ದಾರೆ. ಮನುಷ್ಯನ ಜೀವನದ ಪರಿವರ್ತನೆಯ ಗುಣ ಯಾವರೀತಿಯಲ್ಲಿ ಹೊಂದಿದೆ ಎಂಬುದನ್ನು ಚಿತ್ರಿಸಿದ್ದಾರೆ. ಕೆಲವೊಂದು ಕತೆಗಳಲ್ಲಿ ಅನುಕಂಪ, ಹಾಸ್ಯ ಅನೇಕ ರೀತಿಯ ವಿಭಿನ್ನತೆಯನ್ನು ಒಳಗೊಂಡಿದೆ. ಅಲ್ಲದೇ ಗಂಡು–ಹೆಣ್ಣು ಇವರ ನಡುವೆ ಯಾವುದೇ ರೀತಿಯ ತಾರತಮ್ಯವು ಇರುವುದಿಲ್ಲ. ಇಬ್ಬರೂ ಒಂದೇ ಎನ್ನುವ ಮನೋಭಾವನೆಯನ್ನು ಇವರ ಕತೆಗಳಲ್ಲಿ ಕಾಣಬಹುದು. ಸಾರತತ್ವವು ಒಂದಡೆಯಲ್ಲಿ ನಿಲ್ಲುವುದಿಲ್ಲ. ಒಂದರಿಂದ ಇನ್ನೊಂದಕ್ಕೆ ಎಳೆಯುವುದನ್ನು ನೋಡಬಹುದು. ಹೆಚ್ಚಾಗಿ ಇವರ ಕತೆಗಳಲ್ಲಿ ನಗರೀಕರಣ ಸಮಸ್ಯೆಗಳು ಅಲ್ಲಿನ ಜೀವನವನ್ನು ಚಿತ್ರಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಆಧುನಿಕತೆಯಲ್ಲಿ ವ್ಯಾಪಾರವು ಸಹ ಹೇಗೆ ತನ್ನ ಅಸ್ತಿತ್ವವನ್ನು ಪಡೆದಿದೆ ಎಂಬುದನ್ನು ನೋಡಬಹುದು.

**ಕಡಲ ಹಾದಿ :**

ಉಮಾರಾವ್‌ರವರ ಕೆತೆ, ಕಾದಂಬರಿಗಳಲ್ಲಿ ಮುನುಷ್ಯನ ಸಂಬಂಧಗಳ ವೈವಿಧ್ಯತೆಯನ್ನು ಕಾಣಬಹುದು. ಗಂಡು–ಹೆಣ್ಣಿನ ಸಂಬಂಧದಲ್ಲಿ ವ್ಯತ್ಯಾಸವಿಲ್ಲದೇ ತಾತ್ಕಾಲಿಕವಾಗಿರುತ್ತದೆ. ಆಧುನಿಕತೆಯಲ್ಲಿ ಪ್ರವಾಸ ಮೂಲಕವೂ ಒಂದು ವ್ಯಾಪಾರದ ವಿನಿಯಮಯವನ್ನು ನೋಡಬಹುದು. ಅವರ ಸಾಹಿತ್ಯದಲ್ಲಿ ಸತ್ವತ್ವ ಒಂದರಿಂದ ಇನ್ನೊಂದಕ್ಕೆ ಮುಂದುವರಿಯುತ್ತದೆ. ಪ್ರತಿಯೊಂದು ಕತೆಯಲ್ಲಿ ವಿಭಿನ್ನತೆಯ ಗ್ರಹಿಕೆಯಿರುತ್ತದೆ. ಮುಂಬೈ ಜೀವನವೂ ಹೆಚ್ಚಿನದಾಗಿ ಕಂಡುಬರುತ್ತದೆ. ಅಲ್ಲಿನ ಪರಿಸರ, ರೀತಿ–ನೀತಿಗಳು, ಮಾನವರ ಮೇಲೆ ಯಾವ ರೀತಿಯಲ್ಲಿ ಪ್ರಭಾವ ಬೀರಿವೆ ಎಂಬುದನ್ನು ಕತೆಗಳ ಮುಖಾಂತರ ತಿಳಿಯಬಹುದು.

ಮನುಷ್ಯನ ಸಾಮಾನ್ಯ ಬದುಕು ಆಧುನಿಕತೆಗಿಂತ ಹೇಗೆ ವಿಭಿನ್ನ ಎಂಬುದನ್ನು ಇವರ ಸಾಹಿತ್ಯದಲ್ಲಿ ತಿಳಿಯುತ್ತದೆ. ಇಪ್ಪತ್ತೊಂದನೇ ಶತಮಾನದಲ್ಲಿ ಕೆಲವು ಸಿದ್ಧಸೂತ್ರಗಳು, ನಂಬಿಕೆಗಳು, ಆಚರಣೆಗಳು ಇವು ಯಾವ ರೀತಿಯಲ್ಲಿ ಭಿನ್ನತೆ ಪಡೆದಿವೆ ಎಂಬುದು ತಿಳಿಯುತ್ತದೆ. ಅವರ ಕತೆಯ ಹಿನ್ನೆಲೆಯಲ್ಲಿ ಅಪಾರವಾದ ಅರ್ಥ ಸಂದಿಗ್ದತೆಯನ್ನು ಹೊಂದಿರುತ್ತದೆ. ಅವರ ಸಾಹಿತ್ಯದಲ್ಲಿ ಮಾನವರ ಜೀವನದ ಸಹಜ ಜೀವನದಲ್ಲಿ ವಿಭಿನ್ನತೆಯನ್ನು ನೋಡಬಹುದು.

ಕೆಲವೊಂದು ಕತೆಗಳು ಹಾಸ್ಯದಿಂದ ಕೊನೆಗೊಳ್ಳುತ್ತವೆ. ಕೆಲವೊಂದು ಗಂಭೀರವನ್ನು ಹೊಂದಿರುತ್ತವೆ. ಅನೇಕ ರೀತಿಯಲ್ಲಿ ವಿಶಿಷ್ಟತೆಯೇ ಹೆಚ್ಚಿನದಾಗಿ ಕಂಡುಬರುತ್ತದೆ. ಸತ್ವವು ಮಾತ್ರ ಒಂದರಲ್ಲಿಯೇ ಅಡಗಿರುವುದಿಲ್ಲ. ಹಲವಾರು ರೀತಿಯಲ್ಲಿ ವಿಭಿನ್ನತೆಯಿರುತ್ತದೆ. ಟೂರಿಸಂ ಅನೇಕ ರೀತಿಯ ಪ್ರದೇಶಗಳ ಪರಿಚಯ ಮಾನವರ ಅನೇಕ ರೀತಿಯ ಸಂಬಂಧಗಳ ವಿಭಿನ್ನತೆಯನ್ನು ನೋಡಬಹುದು.

ಇವರ ಕತೆಗಳು ಹೆಚ್ಚಿನದಾಗಿ ಆಧುನಿಕತೆಯ ಹಿನ್ನೆಲೆಯಲ್ಲಿ ರಚನೆಯಾಗಿರುತ್ತವೆ. ನಗರ, ಪಟ್ಟಣ ಹೀಗೆ ವಿಭಿನ್ನ ರೀತಿಯ ಪರಿಸರವನ್ನು ಅವರ ಸಾಹಿತ್ಯದಲ್ಲಿ ಕಾಣಬಹುದು.

'ದೇಹಾಂತ' ಈ ಕತೆಯಲ್ಲಿ ಒಂದು ದಾಂಪತ್ಯವಿದೆ. ಆದರೆ ಕತೆಯಲ್ಲಿ ದಾಂಪತ್ಯದ ಸರಸ ಅಥವಾ ವಿರಸಗಳಿಗೆ ಸಂಬಂಧಿಸಿಲ್ಲ. ಈ ಕತೆಯ ನಾಯಕ ರಾಜೀವ ವಿನಿಮಯ ಅರ್ಥವ್ಯವಸ್ಥೆಯ ಒಂದು ಅಂಗವಾಗಿ ಆರ್ಥಿಕ ಯಶಸ್ಸಿನ ಬೆನ್ನುಹತ್ತಿ ತಾನು ಹುಟ್ಟಿದ ಗ್ರಾಮೀಣ ನೆಲೆಯಿಂದ ಬಹುದೂರ ಹೋಗಿದ್ದಾನೆ. ತನ್ನಲ್ಲಾದ ಪರಿವರ್ತನೆ ಅವನಿಗೆಯೇ ಆಶ್ಚರ್ಯಕರವಾಗಿ ಕಾಣುತ್ತದೆ. ತಾನು ಚಿಕ್ಕಂದಿನಲ್ಲಿ ಪ್ರೀತಿಸಿದ, ತನ್ನನ್ನು ಅತಿಶಯವಾಗಿ ಪ್ರೀತಿಸಿದ ಶ್ರೀಪಾದು ಮಾಮ ತೀರಿಹೋದ ಸುದ್ಧಿ ಬಂದಾಗ ಒಂದುಕ್ಷಣ ನಿಂತು ಅವನು ತನ್ನ ಬದುಕಿನ ದುರಂತವನ್ನು ಕಣ್ಣೆದುರು ನೋಡುವಂತಾಗುತ್ತದೆ.

ತನ್ನ ಜೀವನದಲ್ಲಿ ನಡೆದ ಘಟನೆಗಳನ್ನು ಒಂದರ ಹಿಂದೊಂದರಂತೆ ನೋಡುತ್ತ ನಡೆದಾಗ ಅವನಿಗೆ ದೇಹಾಂತ ಶ್ರೀಪಾದ ಮಾಮನದಾದರೂ ನಿಜವಾಗಿ ಸತ್ತವನು ತಾನೇ ಎನ್ನುವ ಸತ್ಯದ ಅರಿವಾಗುತ್ತದೆ. ಆ ಕ್ಷಣವೇ ಕತೆಯ ಜೀವಾಳವಾಗಿದೆ. ಶ್ರೀಪಾದು ಮಾಮ ತನ್ನ ಆಸ್ತಿಯನ್ನು ರಾಜೀವನಿಗೆ ಬಿಟ್ಟುಕೊಟ್ಟಿದ್ದರೂ ಅದನ್ನು ಅವನು ಸ್ವೀಕರಿಸಲಾರ. ಹೇಳಿದೆನಲ್ಲಾ ಶ್ರೀಪಾದು ಮಾಮ ಆಸ್ತಿ ಬಿಟ್ಟಿದ್ದು ನನಗಲ್ಲ. ಇದು ಆಸ್ತಿಯ ಮೇಲೆ ಕಣ್ಣಿಟ್ಟ ರಮಾಳಿಗೆ ಕೊನೆಯ ಉತ್ತರ. ಇಂಥ ಆಧುನಿಕ ವಸ್ತುವನ್ನು ತಮ್ಮ ಕತೆಗೆ ಆಯ್ದುಕೊಂಡಿದ್ದು ಉಮಾರಾವ್ ಅವರ ವಿಶಿಷ್ಟವಾಗಿದೆ. ಔದ್ಯೋಗಿಕ ಸಂಸ್ಕೃತಿಯನ್ನು ಆಳವಾಗಿ ತಿಳಿದಿರುವುದನ್ನು ನೋಡಬಹುದು.

ಶಿವ ನನ್ನನ್ನು ಒತ್ತಾಯ ಮಾಡದಿದ್ದರೆ, ಆ ಮನೆಯ ದಾರಿ ತಪ್ಪಿಯೂ ಹೋಗುತ್ತಿರಲಿಲ್ಲ ಎಂದು ಶಿವಶಂಕರನ ಸ್ನೇಹಿತ ಹೇಳುತ್ತಾನೆ. ಈ ಕಥೆಯಲ್ಲಿ ಮನೆಯ ವೈಭವ ವಿಚಿತ್ರವನ್ನು ಕತೆಯಲ್ಲಿ ನೋಡಬಹುದು. ಮನೆಯ ಪರಿಸರ, ಬೇಲಿಗಿಡಗಳು, ಸುತ್ತಮುತ್ತಲಿನ ಮನೆಯ ಅಂಗಳ, ಅದರ ವಿಸ್ತಾರ ಎಲ್ಲವನ್ನು ವಿಸ್ತರಿಸುತ್ತಾನೆ. ಮನೆಯು ಹಳೆಯದಾಗಿರುತ್ತದೆ. ಅದರ ಹೆಸರು 'ಶ್ರೀಹರಿ ಪ್ರಸನ್ನ' ಮನೆಯು ಹಳೆಯದಾಗಿದ್ದು, ಅದರ ಹೆಸರು ಶ್ರೀಹ ಎಂಬ ಅಕ್ಷರಗಳು ಬಿದ್ದು 'ರಿ ಪ್ರಸನ್ನ' ಎಂಬುದನ್ನು ಉಳಿದುಕೊಂಡಿರುತ್ತದೆ. ಶಿವಶಂಕರನ ಸ್ನೇಹಿತನಿಗೆ ಅವರ ಮನೆಯಲ್ಲಿ ಕೊಡಲು ಒಂದು ಪ್ಯಾಕಟ್‌ನ್ನು ಕಳುಹಿಸಿರುತ್ತಾನೆ. ಅದನ್ನು ಕೊಡಲು ಅವರ ಮನೆಗೆ ಹೋದಾಗ ಮನೆಯನ್ನು ವೀಕ್ಷಿಸಿದಾಗ ಮನೆಯು ಒಂದು ರೀತಿಯ ಹೊಸ ಪರಿಸರ ಕಾಣುತ್ತದೆ. ಆ ಮನೆಯ ಕರೆಗಂಟೆಯನ್ನು ಬಾರಿಸಿದಾಗ ಮನೆಯೊಳಗೆ ಸ್ವಲ್ಪ ಸಮಯದ ನಂತರ ಮನೆಯ ಬಾಗಿಲನ್ನು ತೆರೆಯಲು ಐವತ್ತು ವರ್ಷದ ವೃದ್ಧಾಪ ವಯಸ್ಸಿನ ಮಹಿಳೆಯು ಬಾಗಿಲನ್ನು ತೆರೆಯುತ್ತಾಳೆ. ಅವಳಲ್ಲಿ ಯಾವುದೇ ರೀತಿಯ ಮುಖದಲ್ಲಿ ಸಂತೋಷ, ಹಾವಭಾವಗಳು ಕಾಣುವುದಿಲ್ಲ. ಶಿವಶಂಕರನ ಸ್ನೇಹಿತ ನಾನು

ನಿಮಗೆ ಪ್ಯಾಕೆಟ್ ಕಳುಹಿಸಿದ್ದಾರೆ ಎಂದು ಕೊಡುತ್ತಾನೆ. ಯಾವುದೇ ರೀತಿಯಲ್ಲಿಯೂ ಪ್ರತಿಕ್ರಿಯೆ ಇರುವುದಿಲ್ಲ. ಮನೆಯೊಳಗೆ ತಾನೇ ಕುಳಿತು ಮಾತಾಡಿಸುತ್ತಾನೆ. ಯಾವ ರೀತಿಯಲ್ಲಿಯೂ ಉತ್ತರ ಸಿಗುವುದಿಲ್ಲ. ನಾನು ಮುಂದಿನ ಊರಿಗೆ ಹೋಗುತ್ತಿದ್ದೇನೆ ನೀವು ಏನಾದರೂ ಕೊಡುವುದಿದ್ದರೆ ಕೊಡಿ ಎಂಬುದಾಗಿ ಹೇಳಿದಾಗ ಯಾವ ರೀತಿಯ ಪ್ರತಿಕ್ರಿಯೆ ಇರುವುದಿಲ್ಲ. ಮನೆಯಲ್ಲಿ ಒಂದು ರೂಂನಲ್ಲಿ ವಯೋಲಿನ್ ಶಬ್ದ ಬರುತ್ತದೆ. ಅದಕ್ಕೆ ವೃದ್ಧಾಪೆಯು ಏನು ಅದು ಶಬ್ದ ಅದನ್ನು ನಿಲ್ಲಿಸು ಎಂಬುದಾಗಿ ತಡಪಡಿಸಿದಾಗ ಮಗು ತಾಯಿ ಹಾಗೇ ಮಾಡುವುದಿಲ್ಲ ನಿಲ್ಲಿಸುತ್ತೇನೆ ಎಂದು ನಿಲ್ಲಿಸುತ್ತಾಳೆ. ವೃದ್ಧಾಪೆಯು ಯಾವುದೇ ರೀತಿಯಲ್ಲಿಯೂ ಶಿವಶಂಕರನಿಗೆ ಒಳ್ಳೆಯ ರೀತಿಯಲ್ಲಿ ಪ್ರತಿ ಉತ್ತರ ಇರುವುದಿಲ್ಲ.

ಮೋಡಗಳು ದಟ್ಟವಾಗಿದ್ದವು. ಆಗಿನ ವಾತಾವರಣ ತಣ್ಣನೆಯ ಗಾಳಿ ಶುರುವಾದ ಮಳೆ ಧಾರಾಕಾರವಾಗಿ ಸುರಿಯ ತೊಡಗಿತು. ಅದರಲ್ಲಿ ರಿ ಪ್ರಸನ್ನ ಎಂಬ ಅಕ್ಷರಗಳು ಕೊಚ್ಚಿ ಹೋಗುತ್ತವೆ. ಅವನು ಕುಳಿತಲ್ಲಿಂದಲೇ ಹಿಂದುರಿಗಿ ನೋಡಿದಾಗ ಸುಂದರವಾದ ಹುಡುಗಿ ವಯೋಲಿನ್ ನುಡಿಸುತ್ತಾ ಅವಳ ಶಿವ ಕಳಿಸಿದ್ದ ಪ್ಯಾಕೆಟ್ ಬಿಚ್ಚಿಟ್ಟಿತ್ತು. ಅದರಲ್ಲಿ ಹಸಿರಂಚಿನ ಹಳದಿ ಸೀರೆ, ಹಸಿರು ಗಾಜಿನ ಬಳಿಗಳು ಇರುತ್ತವೆ. ಈ ರೀತಿಯ ಹೊಸ ರಚನೆಯಾಗಿರುವುದು ಉಮಾರಾವ್‌ರವರ ಕತೆಗಳಲ್ಲಿ ಕಾಣಬಹುದು. ಮನುಷ್ಯನ ಸಂಬಂಧಗಳು ಹೊಸ ರೀತಿಯಲ್ಲಿರುವುದನ್ನು ನೋಡಬಹುದು. ಎಲ್ಲವೂ ಆಧುನಿಕತೆಯ ದೃಷ್ಟಿಯಲ್ಲಿ ಇರುತ್ತವೆ.

'ಕತೆ ಕಳುವಾಗಿದೆಯೇ' ಎಂಬ ಹಾಸ್ಯವನ್ನು ಇವರ ಕತೆಗಳಲ್ಲಿ ಕಾಣಬಹುದು. ಕತೆ ಕಳುವಾಗಿರುವುದಕ್ಕೆ ಅವನ ಆಪ್ತ ಗೆಳೆಯ ಗಿರೀಶನ ಆ ಕತೆ ಕಳುವಾಗುವುದಕ್ಕೆ ಅದರಲ್ಲಿ ಏನಿದಿಯೋ ಎಂಬುದಾಗಿ ಆಶ್ಚರ್ಯಕರವಾಗಿಸುತ್ತದೆ. ಅವನ ಯೋಚನೆಯು ೩೫ ವರ್ಷದ ಸಂತೃಪ್ತ ಗೃಹಿಣಿ, ಗಂಡ, ೧೩ ವರ್ಷದ ಮಗಳೊಂದಿಗೆ ಸುಖವಾಗಿ ಸಂಸಾರ ಮಾಡಿಕೊಂಡಿದ್ದವರು. ಒಂದುದಿನ ಆಶ್ಚರ್ಯಕರವಾಗಿ ಪಕ್ಕದ ಮನೆಗೆ ಬಾಡಿಗೆಗೆ ಬಂದವರು ಕದಿಯಬಹುದಿತ್ತು ಎಂಬುದು ಅದ್ಭುತ ಯೋಚನೆಯಾಗುತ್ತೆ. ಇಲ್ಲವೇ ೧೭ ವರ್ಷದ ಲೀನಾ ಅವರ ಜೋಡಿಯೇ ಕದಿಯಬಹುದಿತ್ತು. ಅದಲ್ಲದೆ ಯಾರು ಕದ್ದಿದ್ದಾರೆ ಎಂಬುದು ಪ್ರಶ್ನಾರ್ತಕವಾಗಿರುತ್ತದೆ.

ಕತೆಯಲ್ಲಿ ಒಬ್ಬ ಮುದುಕ ಪ್ರತಿದಿನ ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ೨೬ ವರ್ಷಗಳ ಕಾಲ ಎಂದೋ ದೋಣಿಯಲ್ಲಿ ತೇಲಿ ಹೋಗಿ ಮರಳಿ ಬರದ ಮೊಮ್ಮಗನಿಗಾಗಿ ಕಾದಿರುತ್ತಾನೆ. ಇದೆಂತಾ ಕತೆಯೋ, ಇದನ್ನು ಯಾರು ಓದುತ್ತಾರೆ ಎಂಬುದಾಗಿ ಗಿರೀಶ ಹೇಳುತ್ತಾನೆ. ಇದರಲ್ಲಿ ನಗರ ಜೀವನವೂ ಕಂಡುಬರುತ್ತದೆ. ಜುಹೂ ಬೀಚಿಗೆ ಸೂರ್ಯಸ್ತ ನೋಡಲು ಹೋಗಿದ್ದಾಗ ಅಲ್ಲಿ ಕಳುವಾಯಿತೆಂದು ಹೇಳುತ್ತಾನೆ. ಚಾಯ್ ಕುಡಿಯಲು ಹೋಗಿದ್ದಾಗ

ಕಳುವಾಯಿತು ಅಥವಾ ಬೇರೆ ಬೇರೆ ಸಂದರ್ಭದಲ್ಲಿ ಛತ್ರಿ, ಬಾಲ್‌ಪೇನ್, ಕಲ್ಲಂಗಡಿಹಣ್ಣು, ಶೇವಿಂಗ್ ಕ್ರೀಮ್ ಮೊದಲಾದ ವಸ್ತುಗಳು ಮರೆತು ಹೋದದ್ದುಂಟು. ಇಂತಹ ಆಧುನಿಕ ವಸ್ತಗಳು ಕಂಡುಬರುತ್ತವೆ. ಜೈ ಮಹಾರಾಷ್ಟ್ರ ಸ್ಟೇಶನರಿ ಮಾರ್ಟ್‌ಗೆ ಹೋದಾಗ ಸ್ಟಿಬ್ಲಿಂಗ್ ಪ್ಯಾಡ್‌ಗಳನ್ನು ಕೊಂಡಾದ ಮೇಲೆ ಚೀಲದ ಬುಡದಲ್ಲಿ ಕತೆಯನ್ನು ಇಟ್ಟಿರುತ್ತಾನೆ. ಹೂ ಮಾರುವವಳ ಹತ್ತಿರ ಹೋಗಿ ಮಲ್ಲಿಗೆಯ ಮಾಲೆಯನ್ನು ಕೊಂಡು ತನ್ನ ಪಕ್ಕದಲ್ಲಿ ಇಟ್ಟುಕೊಂಡು ಮಲಗಿದಾಗಲೂ ಕತೆಯ ಇರುವಿಕೆಯು ನೆನಪಿಗೆ ಬರುತ್ತದೆ.

ಜುಹೂ ಬೀಚ ತಲುಪಿದ ಮೇಲೆ ಹೊತ್ತು ಮೌನವಾಗಿ ಮಾಯವಾಗುತ್ತದೆ. ಕಡಲಲ್ಲಿ ಕರಗುತ್ತಿದ್ದ ಸೂರ್ಯನನ್ನೇ ನೋಡುತ್ತಾ ನಿಂತಿರುತ್ತಾನೆ. ಬದುಕಿನ ವ್ಯವಹಾರಗಳೆಲ್ಲಾ ಕ್ಷುಲ್ಲಕವೆನಿಸುತ್ತದೆ. ಬೇಲ್‌ಪುರಿ, ಪಾನಿಪುರಿ ತಿಂದು ಕಬ್ಬಿನ ರಸವನ್ನು ಕುಡಿದು ತೃಪ್ತನಾಗಿ ಬಂದು ಮರಳ ಮೇಲೆ ಕುಳಿತಿರುತ್ತಾನೆ. ಆಗ ಎದುರಿಗೆ ಎಷ್ಟೋ ವರ್ಷಗಳ ನಂತರ ನಾರಾಯಣನ ಭೇಟಿಯಾಗುತ್ತದೆ. ಅವರ ಮಾತುಕತೆಯಲ್ಲಿ ಚೀಲವನ್ನು ಮರೆತು ಮನೆಯನ್ನು ಸೇರುತ್ತಾನೆ. ಆಗ ಚೀಲದ ನೆನಪು ಬರುತ್ತದೆ. ಆಗಾಗಲೇ ಕತ್ತಲೆಯಿಂದ ಕೂಡಿರುವುದರಿಂದ ಅಲ್ಲಿ ಹೋಗಲು ಸಾಧ್ಯವಾಗುವುದಿಲ್ಲ. ನಂತರ ಮರುದಿನ ಮುಂಜಾನೆಯೇ ಜೂಹೂಗೆ ಪ್ರವೇಶಿಸಿದಾಗ ಅಲ್ಲಿಯ ವಾತಾವರಣವೇ ವಿಚಿತ್ರ ರೀತಿಯಲ್ಲಿ ಕಂಡುಬರುತ್ತದೆ. ಅಲ್ಲಿ ಹಿಂದೆ ಕಂಡುಬಂದ ಜನಜಂಗುಳಿ ಪ್ರೇಮಿಗಳು ಕುಳಿತ ಜಾಗವೂ ಎಲ್ಲವೂ ಸಹ ನಶ್ವರದಿಂದ ಕಾಣಿಸುತ್ತವೆ. ತಾನು ಹೋದ ಜಾಗವೂ ಅದು ಅಲ್ಲ ಎನ್ನುವಂತೆ ಕಾಣಿಸುತ್ತದೆ.

ಚೀಲವನ್ನು ಜೋಪಾನವಾಗಿ ಮಡಿಚಿ ಅದರ ಮೇಲೆ ಕಲ್ಲನ್ನು ಇಟ್ಟಿರುತ್ತಾರೆ. ಅದರಲ್ಲಿ ಇಪ್ಪತ್ತೊಂದು ರೂಪಾಯಿ ನಲವತ್ತು ಪೈಸಾ ಹಣವು ಆಗೆಯೇ ಇರುತ್ತದೆ. ಕ್ರೋಸಿನ್ ಮಾತ್ರೆ, ಬಾಡಿದ ಮಲ್ಲಿಗೆ ಮಾಲೆಯಿರುತ್ತದೆ. ಆದರೆ ಕತೆಯೂ ಮಾತ್ರ ಕಳುವಾಗಿರುತ್ತದೆ. ಬ್ಯಾಗಿನಲ್ಲಿಯೂ ಇರುವುದಿಲ್ಲ. ಹೆಜ್ಜೆ ಗುರುತುಗಳಾಗಿ ಕಾದಿರುವಂತೆ ಭಾಸವಾಗುತ್ತದೆ. ಕದಿಯುವವರು ಹಣವೇಕೆ ಬಿಟ್ಟರು ಎಂಬ ಸಂಶಯ ಕಾಡುತ್ತದೆ. ಬ್ಯಾಗಿನಲ್ಲಿ ಹುಡುಕುತ್ತಿರಬೇಕಾದರೆ ತಾನೇ ಕಳ್ಳನೆಂಬಂತೆ ಭಾಸವಾಗುತ್ತದೆ ಎಂದು ತಿಳಿಯುತ್ತದೆ.

ಸನಿಹದಲ್ಲಿ ಬಡ ಮುದುಕ ಕಂಡು ಆತ ಮುಪ್ಪಿನವನಾಗಿರುತ್ತಾನೆ. ತುಂಬಾ ಸಣಕಲು ದೇಹದಿಂದ ಕೂಡಿರುತ್ತಾನೆ. ಅವನು ಬಂದು ಈತನನ್ನು ಅಪ್ಪಿಕೊಳ್ಳುತ್ತಾನೆ. ಇವನು ಆತನನ್ನು ತಳ್ಳಲು ಮುಂದಾಗುತ್ತಾನೆ. ಆದರೆ ಗುಂಡಿಗೆ ಹರಕಲು ಕೋಟಿನ ದಾರವು ಹಿಡಿದಿರುತ್ತದೆ. ಅದನ್ನು ಬಿಡಿಸಲು ಹೋದಾಗ ಮೃದುವಾಗಿ ಮಾತಾಡಲು ಹೊರಡುತ್ತಾನೆ. ಮುದುಕ ಹೇಳುತ್ತಾನೆ ನನಗೆ ಗೊತ್ತು ಒಂದಲ್ಲಾ ಒಂದುದಿನ ಬರುತ್ತೀಯಾ ಎಂದು ಉದ್ಗಾರವನ್ನು ತೆಗೆದು ಮುದುಕನ ಕಣ್ಣೀರಿನಿಂದ ಆತನ ಕತ್ತು ತೋಯಿಸತೊಡಗುತ್ತದೆ.

ಒಂದು ಪ್ರವಾಸದ ಜೀವನವನ್ನು 'ರೋಡೋ ಡೆಂಡರಾನ್' ಎಂಬ ಕತೆಯಲ್ಲಿ ನೋಡಬಹುದು. ಇದರಲ್ಲಿ ಪ್ರವಾಸ ಜೀವನವನ್ನು ಒಳಗೊಂಡಿದೆ. ಸಿಮ್ಲಾದಿಂದ ಹೋಗಿರುತ್ತಾಳೆ ಶಾಲಿನಿ ಪ್ರವಾಸಕ್ಕೆ. ಅದು ನಗರ ಜೀವನವನ್ನು ಒಳಗೊಂಡಿರುತ್ತದೆ. ಯಾವುದೇ ರೀತಿಯ ಕಟ್ಟುನಿಟ್ಟಲೆಗಳು ಇರುವುದಿಲ್ಲ. ರೈಲಿನಲ್ಲಿ ಇಳಿಯುತ್ತಿದ್ದಂತೆಯೇ ಪ್ರತೀಕನ ನೆನಪು ಬರುತ್ತದೆ. ಮುಂಚೆಯೇ ಸಿಮ್ಲಾ ನಗರದ ವಿವರವನ್ನು ಹೇಳಿರುತ್ತಾನೆ. ಇಳಿದ ತಕ್ಷಣ ಹೊಸ ಪ್ರಪಂಚ, ಜನಜಂಗುಳಿ, ವೈಕಲ್ಸ್, ಹೋಟೆಲ್, ಬೇಕೇ ಬೇಕೇ ಎಂಬ ಕಿರುಚಾಟ ಹಲವಾರು ರೀತಿಯಲ್ಲಿ ವ್ಯಾಪಾರವು ಕಂಡುಬರುತ್ತದೆ. ಅಲ್ಲಿ ಮಾನವನ ಬದುಕು ಹೊಸ ರೀತಿಯಲ್ಲಿ ಕಾಣಸಿಗುತ್ತದೆ.

ಖಾನ್ ಒಬ್ಬನಿಗೆ ಸಾಮಾನು ಒಯ್ಯಲು ಹೇಳಿರುತ್ತಾಳೆ. ಆತ ಸಾಮಾನನ್ನು ಹೋಟೆಲಿಗೆ ಮೇಡಂ ಎಂದು ಕೇಳಿದಾಗ ಮನೆಯಿರುವುದನ್ನು ಹೇಳುತ್ತಾಳೆ. ಶಾಲಿನಿಗೆ ನಗರದ ಜೀವನವೂ ಹೊಸದಾಗಿರುವುದಿಲ್ಲ. ಆಗಾಗಲೇ ಮುಂಬೈ ಜೀವನವನ್ನು ಕಂಡಿರುತ್ತಾಳೆ. ಅಲ್ಲಿದಾರಿ ಏರುತಗ್ಗುನಲ್ಲಿರುತ್ತದೆ. ಅನೇಕ ರೀತಿಯ ಸಿನಿಮಾ ಶೂಟಿಂಗ್ ನಡೆದ ಜಾಗವನ್ನು ನೋಡುತ್ತಾಳೆ. ಅದು ಇಸ್ನೆಂಡಲ್ ಪಾಯಿಂಟ್ ಎಂದು ಕರೆಯುವರು ಖಾನ್ ವಿವರಿಸುತ್ತಾನೆ. ನಂತರ ಸ್ಯಾಂಡಲ್ ಪಾಯಿಂಟ್‌ನ್ನು ನೋಡಿದಾಗ ಪ್ರೇಮಿಗಳ ಸ್ಥಳ ಪ್ರತಿಯೊಬ್ಬರು ಇಲ್ಲಿಯೇ ಭೇಟಿಯಾಗುತ್ತಾರೆ. ಅಲ್ಲಿನ ಪರಿಸರದ ಪರಿಚಯ ತಿಳಿಸುತ್ತಾನೆ. ಪ್ರತೀಕನ ನೆನಪು ಬರುತ್ತದೆ. ನಂತರ ಹಾಗೆಯೇ ಹೋಗುತ್ತಿದ್ದಂತೆಯೇ ರೋಡೋಡೆಂಡ್‌ರಾಸ್ ಎಂಬ ಕೆಂಪು ಹೂಗಳಿಂದ ತುಂಬಿದ ಮರವೊಂದು ವಿಚಿತ್ರವಾಗಿರುತ್ತದೆ. ಇದೆಯೇ ಪ್ರವಾಸದಲ್ಲಿ ಅದ್ಭುತವಾಗಿರುತ್ತದೆ. ಇಂಥಾ ಮರಗಳು ಸಿಮ್ಲಾದಲ್ಲಿ ಹೆಚ್ಚಿನದಾಗಿ ಸಿಗುತ್ತವೆ ಎಂಬುದಾಗಿ ಹೇಳುತ್ತಾನೆ. ಮನೆಯ ಪ್ರವೇಶ ಕೂಡವ ಮೊದಲೇ ಅನೇಕ ರೀತಿಯ ಬಣ್ಣ ಬಣ್ಣದ ಹೂಗಳು, ಬಳ್ಳಿಗಳು ಎಲ್ಲವೂ ಅಲ್ಲಿರುತ್ತವೆ. ಮನೆಯನ್ನು ಪ್ರವೇಶಿಸುತ್ತಾಳೆ. ಅಲ್ಲಿ ಕಿಟಕಿಗಳನ್ನು ತೆಗೆದಾಗ ವಿಭಿನ್ನತೆಯಿರುತ್ತದೆ. ನಂತರ ಖಾನನನ್ನು ಕಳುಹಿಸುತ್ತಾಳೆ. ಏಕಾಂಗಿಯಾಗಿ ಮನೆಯಲ್ಲಿ ಎಲ್ಲವನ್ನು ನೋಡಿದಾಗ ದೀಪವೂ ಇರುವುದಿಲ್ಲ. ಕ್ಯಾಂಡಲ್ ಸಿಗುತ್ತೆ. ಹಾಗೆಯೇ ಗಮನಿಸಿದಾಗ ಆ ಮರದ ಹೂವುಗಳು, ಪಕಳೆಗಳು ಸುಂದಾನಿ, ಹೂದಾನಿ, ಗಾಜಿನ ಕಿಟಕಿಗಳು, ಸುತ್ತುವರಿದ ದೇವದಾರು ಮರಗಳು ಎಲ್ಲವೂ ವೀಕ್ಷಿಸಿ ಸ್ನಾನಕ್ಕೆ ಹೊರಡುತ್ತಾಳೆ. ತನ್ನ ಸೌಂದರ್ಯವನ್ನು ವರ್ಣಿಸುತ್ತಾ ಪ್ರತಿಬಿಂಬವನ್ನು ಮೆಚ್ಚಿಗೆಯಿಂದ ಗಮನಿಸುತ್ತಾಳೆ.

ಮನೆಯಲ್ಲಿ ಇದ್ದಕ್ಕಿದ್ದಂತೆ ಬಾಗಿಲು ಬಡೆದಾಗ ಶಬ್ದವು ಕಂಡುಬರುತ್ತದೆ. ಒಳಗೆ ಅನುಮತಿಯನ್ನು ನೀಡುತ್ತಾಳೆ. ಅವನಲ್ಲಿ ಕಿರುನಗೆಯು ಕಾಣಿಸುತ್ತದೆ. ಶಾಲಿನಿ ನಾನು ನಿನಗಾಗಿಯೇ ಕಾದಿದ್ದೆ ಬಾ ಎಂದು ಕರೆಯುತ್ತಾಳೆ. ಮ್ಯಾಮ್ ಎಂದು ಕರೆಯುತ್ತಾನೆ. ಆ ರೀತಿ ಕರೆಯಬೇಡ ಸೂಚಿಸುತ್ತಾಳೆ. ಅವಳ ಎರಡು ಕೈಗಳು ಅವನ ಭುಜದ ಮೇಲೆ ಇಡುತ್ತಾಳೆ. ಅವನ ಅಪ್ಪುಗೆಯಲ್ಲಿ ಪ್ರವೇಶಕ್ಕೆ

ಹೋದಾಗ ಅವನು ದೂರ ಸರಿಯುತ್ತಾನೆ. ಅವಳು ಅಲ್ಲೋಲಕಲ್ಲೋಲವಾಗುತ್ತಾಳೆ. ನಂತರ ಶಾಲಿನಿಯನ್ನು ಅವನು ತಳ್ಳುತ್ತಾನೆ. ಕೆಳಗೆ ಬಿದ್ದು ರಕ್ತವನ್ನು ಸುರಿಸುತ್ತಾಳೆ. ತನ್ನ ಎಡಗೆನ್ನೆಯ ಮೇಲೆ ಮಚ್ಚೆಯನ್ನು ಕಂಡು ಬೆಚ್ಚಿ ಬೀಳುತ್ತಾಳೆ. ಅದು ಪ್ರತೀಕ ರೂಪವಾಗಿರುತ್ತದೆ. ಆಶ್ಚರ್ಯಳಾಗುತ್ತಾಳೆ. ಶಾಲಿನಿ ಕಣ್ಣುಬಿಟ್ಟಾಗ ರೂಮಿನಲ್ಲಿ ಬೆಳಕು. ತಾನು ಯಾವಾಗ ಇಲ್ಲಿಗೆ ಬಂದೆ ಎಂಬ ಪ್ರಶ್ನೆಗಳು ಕಾಡುತ್ತವೆ. ಅಲ್ಲಿನ ಪರಿಸರ ಅದರಲ್ಲಿರುವ ಹೊಸ ರೀತಿಯ ಮರಗಳು ಎಲ್ಲವೂ ಮನಸ್ಸಿಗೆ ಬರುತ್ತವೆ.

ಇದರಲ್ಲಿ ಹೊಸ ರೀತಿಯ ಮನುಷ್ಯನ ಸಂಬಂಧಗಳು ಕಂಡುಬರುತ್ತವೆ. ಗಂಡು–ಹೆಣ್ಣಿನೊಡನೆ ಯಾವುದೇ ರೀತಿಯ ಬೇಧ–ಭಾವ ಕಂಡುಬರುವುದಿಲ್ಲ. ಪ್ರವಾಸದ ಜೀವನವೂ ಕಾಣಬರುತ್ತದೆ. ಇವೆಲ್ಲವೂ ಕಾಣಲು ಈಗಿನ ಉಮಾರಾವ್‌ರವರ ಕತೆಗಳಲ್ಲಿ ಕಾಣಲು ಸಾಧ್ಯವಾಗುತ್ತದೆ. ಇದರಲ್ಲಿ ಹೊಸ ರೀತಿಯ ಸೃಷ್ಟಿಯನ್ನು ನೋಡಬಹುದು.

'ಬಹುಮುಖಿ' ಕತೆಯಲ್ಲಿ ಮನುಷ್ಯನ ಕನಸಿನ ಲೋಕವನ್ನು ಕಾಣಬಹುದು. ಹಾಗೆಯೇ ಮನುಷ್ಯನ ಆಸೆಗಳಿಗೆ ಮಿತಿ ಇರುವುದಿಲ್ಲ. ಕೊನೆಗೆ ಪಾಶ್ಚಾತಾಪವಾಗುತ್ತಾನೆ. ಶರಣನಿಗೆ ಅನೇಕ ರೀತಿಯ ಚಿಂತನೆಗಳು ಕಾಡುತ್ತಿರುತ್ತವೆ. ತಾನು ಜೀವನದಲ್ಲಿ ಯಾಕೆ ಏನನ್ನು ಸಾಧಿಸಲಿಲ್ಲ ಎಂಬ ಅನೇಕ ಪ್ರಶ್ನೆಗಳು ಕಾಡುತ್ತಿರುತ್ತವೆ. ಅದಕ್ಕಾಗಿ ಅದರಲ್ಲಿ ತಲ್ಲೀನನಾಗುತ್ತಾನೆ. ತುಂಬಾ ಹತಾಶನಾಗುತ್ತಾನೆ. ಅದಕ್ಕಾಗಿ ಅದರ ಪರಿಹಾರಕ್ಕೆ, ಕಾಕಾ ನಿನಗೆ ಏನು ಬೇಕು ನಾನು ಕೊಡಬಲ್ಲೆ ಯಾವುದೇ ರೀತಿಯಲ್ಲಿಯೂ ಪರಿತಪಿಸಬೇಡ ಎಂದು ವಾಗ್ದಾನವನ್ನು ಕೊಡುತ್ತಾಳೆ. ಆಕೆಯು ಸರ್ವಶಕ್ತಿಯಾಗುತ್ತಾಳೆ. ಅದಕ್ಕೆ ಶರಣ ಜಗತ್ತಿನಲ್ಲಿ ಅತಿಶಕ್ತಿಯುತವಾದ ಮನುಷ್ಯನನ್ನು ಮಾಡು ನನಗೆ ಸರಿಸಾಟಿಯಿಲ್ಲ ಎಂಬುದಾಗಿ ಕೇಳುತ್ತಾನೆ. ಕಾಲ ನಗರಿಯಲ್ಲಿ ಬಹುಮುಖಿಯ ಶಿಲೆಯೊಂದಿರುತ್ತದೆ. ಅದನ್ನು ಚೌಕದಲ್ಲಿಡಲು ಯಾರಿಂದಲೂ ಆಗಿರುವುದಿಲ್ಲ. ಅದರ ಸಾಧನೆಗೆ ಹೊರಟಾಗ ಅದಕ್ಕೆ ಶಕ್ತಿಯಲ್ಲ ಬುದ್ಧಿ ಎಂಬುದಾಗಿ ಹೇಳುತ್ತಾರೆ. ನಂತರ ಕಾಕಾನಿಂದ ಬುದ್ಧಿಯನ್ನು ಪಡೆಯುತ್ತಾನೆ. ಅದರಲ್ಲಿಯೂ ಅವನಿಗೆ ತೃಪ್ತಿಯೂ ಸಿಗುವುದಿಲ್ಲ. ಇನ್ನೂ ಹೆಚ್ಚಿನ ರೀತಿಯ ಆಸೆಯನ್ನು ಇಡೀ ಜಗತ್ತು ತನ್ನ ಅಧೀನದಲ್ಲಿಡಲು ಕೇಳುತ್ತಾನೆ. ಸೂರ್ಯನ ನಿಯಂತ್ರಣವನ್ನು ಕೇಳಿದಾಗ ನದಿ, ಸಾಗರ, ಚಂದ್ರ, ತಾರೆ ಭಯಂಕರ ಸ್ಥಿತಿಗೆ ಹೋಗುತ್ತದೆ. ಅಶಾಂತಿಯು ಆವರಿಸುತ್ತದೆ. ತನ್ನ ಕನಸಿನಲ್ಲಿಯೇ ಎಲ್ಲವನ್ನು ತೊಡಗಿಸಬೇಕೆಂದು ಭಾವನೆ ಮನಸ್ಸಿನೊಳಗೆ ಬಂದಾಗ ಕಾಕಾನನ್ನು ಬೇಡುತ್ತಾನೆ. ಎಲ್ಲವೂ ಬೇಡ ಎಂದು ಹೇಳಿದಾಗ ಇವು ಎಲ್ಲವೂ ಕನಸಾಗಿಸು ನಿಜವಲ್ಲವೆಂದು ತೋರಿಸು ಕಾಕಾ ಎಂಬುದಾಗಿ ಹೇಳುತ್ತಾನೆ. ಕಾಕಾ ಇದು ನಿಜವಲ್ಲ ನೀನು ಕನಸಿನ ಲೋಕದಲ್ಲಿ ಏವರಿಸುತ್ತಿದ್ದೀಯಾ ಎಂಬುದಾಗಿ ಹೇಳುತ್ತಾನೆ. ಇದೆಲ್ಲವೂ ಮುರ್ಖತನವನ್ನು ತೋರಿಸುತ್ತದೆ. ಶರಣ

ನಾನು ಬರಿಯ ನಿನ್ನ ಕನಸೆನ್ನುವುದು ನಿಜ, ಆದರೆ ಅದರಿಂದ ಹೊರಬರುವುದು ಅಷ್ಟು ಸುಲಭವಲ್ಲ. ಏಕೆಂದರೆ ಅಂತೆಯೇ ನೀನು ನನ್ನ ಕನಸು ಎಂಬುದಾಗಿ ಹೇಳುತ್ತಾಳೆ.

ಹೊರಗಿನ ಪ್ರಪಂಚವನ್ನು ನೋಡಿದಾಗ ಅನೇಕ ರೀತಿಯ ಸಮಸ್ಯೆಗಳು, ಗೊಂದಲಗಳು ಕಾಣುತ್ತವೆ. ತಮ್ಮ ತಮ್ಮ ಕೆಲಸಗಳಲ್ಲಿ ತಾವು ನಿರತರಾಗಿರುವುದನ್ನು ನೋಡಬಹುದು. ಶಾಲಿಮಾಗೆ ಹಗಲಿನಲ್ಲಿಯೇ ಹಲವಾರು ರೀತಿಯ ತೊಡಕಿನ ಕನಸುಗಳು ಕಾಣುತ್ತವೆ. ಎಣ್ಣೆಯಂಗಡಿಯ ಪಾಂಡೆ, ಲಕ್ಷ್ಮೀ ಹಾರ್ಡ್‌ವೇರ್ ಸ್ಟೋರ್ಸ್‌ನ ಶೆಟ್ಟಿ, ಅಕ್ಕಸಾಲಿಗ, ಅನೇಕ ಬಗೆಯ ವ್ಯಾಪಾರಸ್ಥರು, ವೃದ್ಧಾಪ್ಯ ವಯಸ್ಸಿನವರು, ಸಾವಿರಾರು, ಲಕ್ಷಾಂತರ, ಕೋಟ್ಯಾಂತರ ಜನರ ಅನೇಕ ಸಮಸ್ಯೆಗಳು ಕಾಣುತ್ತವೆ.

ಸೂರ್ಯೋದಯದಿಂದ ಸೂರ್ಯಾಸ್ತದವರೆಗೆ ಜನರು ನಾನಾ ರೀತಿಯ ಕೆಲಸದಲ್ಲಿ ನಿರತರಾಗಿರುತ್ತಾರೆ. ಈಗಿನ ಕಾಲದಲ್ಲಿ ಯಾವುದೇ ರೀತಿಯ ಬೇಧಭಾವವಿಲ್ಲದೇ ಸಮಾನ ರೀತಿಯ ಕೆಲಸದಲ್ಲಿ ತೊಡಗಿರುತ್ತಾರೆ. ಶಾಲಿಮಾ ಎಲ್ಲವನ್ನು ಕುಳಿತಲ್ಲಿಂದಲೇ ಮಾನವನ ನೈಜ ಸ್ವರೂಪವನ್ನು ಕನಸಿನ ಮೂಲಕ ಕಾಣತೊಡಗುತ್ತಾಳೆ. ಆಧುನಿಕತೆಯ ಪರಿಸರದಲ್ಲಿ ತಾಂತ್ರಿಕ ಜೀವನವನ್ನು ಹೆಚ್ಚಿನದಾಗಿ ಕಂಡುಬರುತ್ತದೆ. ಇವೆಲ್ಲವೂ ಮನುಷ್ಯನ ಸ್ವಭಾವವೂ ಈಗ ಯಾವ ರೀತಿಯಲ್ಲಿದೆ ಎಂಬುದನ್ನು ತಿಳಿಸುತ್ತದೆ. ಆಲೋಚನಾ ಶಕ್ತಿಯಿರಬಹುವುದು, ಕೆಲಸ ಕಾರ್ಯಗಳಿರಬಹುದು, ತಾನು ಬಳಸುವ ವಸ್ತುಗಳಿರಬಹುದು, ಇವೆಲ್ಲವೂ ಈಗಿನ ಮಟ್ಟದಲ್ಲಿ ಯಾವ ರೀತಿಯಲ್ಲಿ ಮಹತ್ವ ಪಡೆದಿದೆ ಎಂಬುದನ್ನು ತಿಳಿಸುತ್ತದೆ.

ಮಾನವನ ಯೋಚನಾ ಶಕ್ತಿಯು ದಿನೇ ದಿನೇ ಬದಲಾವಣೆಯ ಗುಣವನ್ನು ಹೊಂದಿರುವುದನ್ನು ನೋಡಬಹುದು. ಎಲ್ಲಾ ರೀತಿಯಲ್ಲಿಯೂ ವೈವಿಧ್ಯಮಯವನ್ನು ಹೊಂದಿರುವುದನ್ನು ನೋಡಬಹುದು. ಆಕೆ ಎನ್ನುವ ಸೂಚನೆಯೇ ಹೊರಗಿನ ಪ್ರಪಂಚವನ್ನು ತಿಳಿಸುತ್ತದೆ.

'ಇನ್ನು ಎಲ್ಲಿಗೋಟ' ಎಂಬ ಕತೆಯಲ್ಲಿ ಒಂದು ವಿಧಾನ, ರೀತಿ–ನೀತಿ ಎಲ್ಲವೂ ಕತೆಯಲ್ಲಿ ನೋಡಬಹುದು. ಮಗನಿಗೆ ತಂದೆಯು ಅನೇಕ ರೀತಿಯ ಕಟ್ಟುಪಾಡುಗಳನ್ನು ಹಾಕುತ್ತಿದ್ದರು. ಈಗಿನ ಸಮಾಜದಲ್ಲಿ ಮಕ್ಕಳು ಕೆಡುತ್ತಾರೆ ಎಂಬ ದೃಷ್ಟಿಯಿಂದ ಯಾವುದೇ ರೀತಿಯಲ್ಲಿ ಮಕ್ಕಳಿಗೆ ಸ್ವತಂತ್ರ್ಯವನ್ನು ಕೊಡುವುದಿಲ್ಲ. ಡ್ರಸ್‌ನಿಂದ ಹಿಡಿದು ಕಟಿಂಗ್‌ನವರೆಗೂ ಎಲ್ಲವೂ ತಂದೆಯ ನಿಯಮಗಳಿಗೆ ಬದ್ಧನಾಗಿರುತ್ತಿದ್ದ. ತುಂಬಾ ಸಂಪ್ರದಾಯಸ್ಥ ಕುಟುಂಬವಾಗಿರುತ್ತದೆ. ತಂದೆಯೂ ಮಾತ್ರ ಹೊರಗೆ ತನ್ನ ಅಭ್ಯಾಸಗಳನ್ನು ಮಾಡುತ್ತಿದ್ದ. ಅಮ್ಮ, ಮಗನಿಗೆ ಸ್ವತಂತ್ರ್ಯವೇ ಇರುತ್ತಿರಲಿಲ್ಲ. ತಂದೆಯ ನಿಯಮಗಳಲ್ಲಿ ಜೀವನವನ್ನು ನಡೆಸಬೇಕಾಗಿರುತ್ತದೆ. ರಾತ್ರಿಯಲ್ಲಿ ಕೆಟ್ಟ ಕನಸುಗಳಿಂದ ಬೆಚ್ಚಿಬಿದ್ದರೂ ಅವುಗಳನ್ನು ಹೇಳಲು ಅವಕಾಶವೂ ಇರುತ್ತಿರಲಿಲ್ಲ. ಮನೆಗೆ ಅಜ್ಜಿಯ ಆಹ್ವಾನವನ್ನು

ಕೊಟ್ಟಾಗ ತುಂಬಾ ಖುಷಿಯಿಂದ ಇರುತ್ತಾನೆ. ಯಾವುದೇ ರೀತಿಯಲ್ಲಿ ಸ್ನೇಹಿತರೂ ಎಂದು ಅವರ ಹಿಂದೆ ತಿರುಗುವಂತಹದು ಇರುತ್ತಿರಲಿಲ್ಲ. ಜುಜೂ ವಾಲಾ ಎಂಬ ಸ್ನೇಹಿತನು ಇರುತ್ತಾನೆ. ಹೋಳಿ ಹಬ್ಬದ ದಿನ ಮನೆಗೆ ಬರುತ್ತಾರೆ. ತಂದೆಯ ಭಯದಿಂದ ಹೆದರುತ್ತಾನೆ. ಆಗಲೂ ಅವರು ಬಿಡುವುದಿಲ್ಲ. ಬಣ್ಣವನ್ನು ಹಚ್ಚಿ ಕಿರುಚಾಡಿ ಹೋಗುತ್ತಾರೆ. ಮನೆಯಲ್ಲಿ ಏಕಾಂಗಿಯಾಗಿರುತ್ತಾನೆ. ಹೊರಗಡೆ ಹೋದಾಗ ಅಂಗಡಿಯಲ್ಲಿ ಸಿಗರೇಟನ್ನು ತಂದೆಯು ಸೇದುತ್ತಿರುತ್ತಾನೆ. ಇದನ್ನು ಕಂಡು ಮಗ ಮನೆಗೆ ಹೋಗಿ ಸಿಗರೇಟ ಧಂ ಎಳೆಯುತ್ತಾನೆ. ಪಪ್ಪ ರೂಂ ಬಾಗಿಲು ತೆಗೆದಾಗ ಹೊಗೆಯು ರೂಂನಲ್ಲಿ ಸುತ್ತುವರೆದಿರುತ್ತದೆ. ಅದನ್ನು ನೋಡಿ ದಡದಡನೆ ಹೊರಟು ಹೋಗುತ್ತಾನೆ. ತಂದೆಯ ಚಟಗಳನ್ನು ನೋಡಿ ಮಗನು ತನ್ನ ಜೀವನದಲ್ಲಿ ಕೆಲವು ಪಾಲಿಸುತ್ತಾನೆ. ಮೊದಲಿನಲ್ಲಿ ಹೆಚ್ಚಿನ ನಿಯಮಗಳಿಗೆ ಒಳಪಟ್ಟಿದ್ದು, ನಂತರ ತಂದೆಯ ಕೆಟ್ಟ ಅಭ್ಯಾಸಗಳು ಮಗನ ಮೇಲೆ ಪ್ರಭಾವ ಬೀರುತ್ತವೆ.

ರಾಜಾರಾಮನಿಗೆ ಹಿಂದೆಂದೂ ಆಗದ ಘಟನೆಯು ನಡೆಯುತ್ತದೆ. ಅದು ತನ್ನ ಅನುಭವದಲ್ಲಿ ನಡೆದ ಮೊದಲ ಘಟನೆಯಾಗಿರುತ್ತದೆ. ಅದು ಮರೆವು ಎಂಬುದು ತಾನು ಎಲ್ಲಿಂದ ಎಲ್ಲಿಗೆ ಹೊರಟಿದ್ದೇನೆ ಎಂಬುದೆ ತಿಳಿಯದು. ಅಂತಹ ಸನ್ನಿವೇಶ ಬರುತ್ತದೆ. ಅಂದು ಭಾನುವಾರ ತಿಂಡಿ ತಿಂದು ಸಾಧಾರಣ ಉಡುಗೆಯಲ್ಲಿ ಪ್ರಯಾಣವನ್ನು ಬೆಳೆಸುತ್ತಾನೆ. ಹೆಂಡತಿಯನ್ನು ಕೇಳಿದಾಗ ತಾನು ಎಲ್ಲಿಗೆ ಹೊರಟಿದ್ದೇನೆ ಎಂಬುದನ್ನು ತಾವು ಯಾವತ್ತು ನನ್ನ ಅನುಮತಿಯ ಮೆರೆಗೆ ನಡೆದವರಲ್ಲ ಎಂಬುದಾಗಿ ಹೇಳುತ್ತಾಳೆ. ಎಡಗಡೆ ತಿರುವಿನಲ್ಲಿ ಪ್ರಯಾಣವನ್ನು ಬೆಳೆಸುತ್ತಾನೆ. ಅನೇಕ ರೀತಿಯ ದೇವಸ್ಥಾನ, ಮಾರ್ಕೆಟ್, ಹೆದ್ದಾರಿಗಳು ಆ ದಾರಿಯನ್ನು ಹಿಡಿಯುತ್ತಾನೆ. ದಾರಿಯಲ್ಲಿ ವಿಚಿತ್ರ ರೀತಿಯ ಘಟನೆಗಳು ನಡೆಯುತ್ತವೆ. ತನಗೆ ಪರಿಚಯವಿರುವ ಅನೇಕ ರೀತಿಯ ಪ್ರಶ್ನೆಗಳನ್ನು ಹಾಕುತ್ತಾರೆ. ಎಲ್ಲಿಗೆ ಹೊರಟಿದ್ದೀರಿ ಎಂಬುದಾಗಿ, ಆದರೆ ಅವರಿಗೆ ಉತ್ತರವನ್ನು ನೀಡುವ ಪರಿಸ್ಥಿತಿಯಲ್ಲಿ ಇರಲಿಲ್ಲ. ರಾಜಾರಾಮರಾವ್‌ರವರು, ಗಂಗಾಧರರವರು ಕಾಣಿಸಿಕೊಂಡು ನಮಸ್ಕಾರ ಮಾಡಿ ಅವರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ.

ರಾಜಾರಾಮರವರಿಗೆ ತನ್ನ ಬದುಕಿನ ಬಗ್ಗೆ ತನಗೆ ತಿಳಿಯದ ರೀತಿಯಲ್ಲಿ ಜೀವನವನ್ನು ನಡೆಸುತ್ತಾನೆ. ವಿಚಿತ್ರ ರೀತಿಯ ಪಾತ್ರವನ್ನು ಉಮಾರಾವ್‌ರವರ ಕತೆಗಳಲ್ಲಿ ಕಾಣಬಹುದು. ಹಾಗೆಯೇ ತನ್ನ ಪ್ರಯಾಣವನ್ನು ಮುಂದುವರಿಸಿರುತ್ತಾನೆ. ತುಂಬಾ ದಣಿದು ಹಸಿವು ಕಾಡುತ್ತಿರುತ್ತದೆ. ತನಗೆ ಅರಿವಿಲ್ಲದಂತೆಯೇ ಊರಾಚೆ ಒಂದು ಆಲದ ಮರದ ಕೆಳಗೆ ಪೆಟ್ಟಿಯಂಗಡಿಯ ಬಳಿ ಸೇರುತ್ತಾನೆ. ಅಂಗಡಿಯ ಮುದುಕ ಮತ್ತು ಹದಿನೆಂಟು ಇಪ್ಪತ್ತು ವರ್ಷದ ಹುಡುಗಿಯು ಇರುತ್ತಾರೆ. ಆ ಹುಡುಗಿಯು ದಣಿದಿದ್ದೀರಿ ನೀರು ಬೇಕಾ ಎಂಬುದಾಗಿ ನೀರು ಕೊಡುತ್ತಾಳೆ. ಅವರ

ಮಾತುಕತೆಯು ಮುಂದುವರೆಯುತ್ತದೆ. ಅದಕ್ಕೆ ಮುದಕನು ನಿಲ್ಲಿಸು ಎಂಬುದಾಗಿ ಹೇಳುತ್ತಾನೆ. ಇಲ್ಲಿ ಹೆಣ್ಣಿಗೆ ನಿಯಂತ್ರಣವನ್ನು ನೋಡಬಹುದು. ಹಾಗೆಯೇ ಮುಂದುವರಿಯುತ್ತಿರಬೇಕಾದರೆ ಹುಡುಗಿಯು ಪ್ರವೇಶವಾಗುತ್ತದೆ. ಎಲ್ಲಿ ಎಂದು ಕೇಳಿದಾಗ ಹನುಮನ ಹತ್ತಿರ ಎಂದು ಹೇಳುತ್ತಾಳೆ. ಅವರಿಬ್ಬರೂ ಪ್ರೇಮಿಗಳು, ನೀರಿನಲ್ಲಿ ಬಿದ್ದು ಸತ್ತಿರುತ್ತಾನೆ. ಅದರಿಂದ ಹುಚ್ಚಿಯಾಗಿರುತ್ತಾಳೆ. ನಂತರ ಮುಂದೆಯು ಸ್ವಾಮಿಯನ್ನು ಗುಡಿಗೆ ಹೊರಟಿದ್ದೀರಾ ಎಂಬುದಾಗಿ ಕೇಳುತ್ತಾರೆ. ಹೌದು ಎಂದು ಹೇಳುತ್ತಾರೆ. ದೇವರಿಗೆ ಹರಕೆಯನ್ನು ಪಡೆದಿದ್ದೀರಿ ಎಂಬುದಾಗಿ ಕೇಳಿದಾಗ ನಾನು ಹರಕೆಯನ್ನು ಮಾತ್ರ ಪಡೆದಾಗ ಹೋಗುವುದಿಲ್ಲ. ನೆಮ್ಮದಿ ಸಿಗಲೆಂದು ಹೊರಟಿದ್ದೇನೆಂದು ಹೇಳುತ್ತಾನೆ. ರಾಜಾರಾಮ್‌ನಿಗೆ ಯೋಚನೆಯಲ್ಲಿ ಮುಳಗಿದಾಗ ಹೆಂಡತಿ ಸುಗುಣಾ, ಮಗ ಚೀನಿ ಹೋಂವರ್ಕ್, ಆಫೀಸ್, ರಾಜಕೀಯ ಎಲ್ಲವೂ ಕಣ್ಣಮುಂದೆ ಕಟ್ಟುತ್ತದೆ. ಇವೆಲ್ಲವೂ ನೆನಸಿಕೊಂಡಾಗ ತಲೆ ಧಿಂ ಎಂದೆನಿಸುತ್ತದೆ. ತಾನು ತನ್ನ ಹತ್ತಿರ ತಮಟೆಯ ಶಬ್ದವೂ ಕೇಳಿಸುತ್ತೆ ತನ್ನ ಹತ್ತಿರ ಹೆಣ ಹೊತ್ತುಕೊಂಡು ಒಯ್ಯುವುದು. ಆಗ ಎದೆಬಡಿತ ನಿಧಾನವಾಗಿ ತಲೆ ಹಗುರವಾಯಿತು. ವಿಚಿತ್ರ ಮೈಯೆಲ್ಲಾ ಆವರಿಸಿ ಹಾಯೆನಿಸತೊಡಗಿತು.

ರಾಜಾರಾಮರವರ ವಿಚಿತ್ರ ಭಾವನೆಯನ್ನು ಕತೆಯಲ್ಲಿ ಕಾಣಬಹುದು. ಈ ಕತೆಯಲ್ಲಿ ಮರೆವು ಎಂಬುದು ಪ್ರಮುಖವಾಗಿದೆ. ಹಲವಾರು ರೀತಿಯ ಘಟನೆಗಳು, ಅನೇಕ ರೀತಿಯ ಹೊಸ ಪರಿಚಯವನ್ನು ಈ ಕತೆಗಳಲ್ಲಿ ಕಾಣಬಹುದು. ಉಮಾರಾವ್‌ರವರ ಕತೆಗಳಲ್ಲಿ ಹೊಸ ರೀತಿಯ ಸಂಭವಗಳನ್ನು ತಿಳಿಯಬಹುದು. ಇದರಲ್ಲಿ ಮಹಿಳೆಗೂ ಯಾವ ರೀತಿಯ ಸ್ಥಾನವನ್ನು ಕೊಟ್ಟಿದ್ದಾರೆಂಬುದನ್ನು ನೋಡಬಹುದು. ಈ ಕತೆಯಲ್ಲಿ ರಾಜಾರಾಮರವರು ಸಹ ತನ್ನ ಜೀವನದಲ್ಲಿ ಪರಿವರ್ತನೆಯ ಗುಣವನ್ನು ಕೆಲವೊಂದು ಘಟನೆಗಳಿಂದ ಬದಲಾವಣೆಗೊಳ್ಳುತ್ತಾರೆ. ಹೀಗೆ ಅನೇಕ ರೀತಿಯ ಹೊಸ ಪರಿಚಯವನ್ನು ಅವರ ಕತೆಗಳಲ್ಲಿ ಕಾಣಬಹುದು.

ಈಗಿನ ಕಾಲದಲ್ಲಿ ಮನುಷ್ಯ ಒಂದಲ್ಲಾ ಒಂದು ಕೆಲಸದಲ್ಲಿ ನಿರಂತರ ನಿರತನಾಗಿರುತ್ತಾರೆ. ಅವರ ಜೀವನವೂ ಅಷ್ಟೇ ಅವಸರದಿಂದ ಕೂಡಿರುತ್ತದೆ. ಅದಕ್ಕೆ ಕಾರಣ ನಗರ ಜೀವನವೂ ಆಗಿರುತ್ತದೆ. ಅವರು ಯಾವುದೇ ಒಂದು ಕೆಲಸದಲ್ಲಿ ತೊಡಗಿರುತ್ತಾರೆ. ಆಸ್ಪತ್ರೆಯಲ್ಲಿ ಸಹ ಭೇಟಿಕೊಡಲು ಆಗದಂತಹ ಕೆಲಸದಿಂದ ಕೂಡಿರುತ್ತದೆ. ವಿಮಲಾ ಎನ್ನುವ ಮಹಿಳೆಯ ಗಂಡ ಸೈಕೊ ಆಗಿರುತ್ತಾನೆ. ಆದ್ದರಿಂದ ತೋರಿಸಲು ಆಸ್ಪತ್ರೆಗೆ ಹೋದಾಗ ಅಪಾಯಿಂಟ್‌ಮೆಂಟ್‌ಗಾಗಿ ಆಕೆಯ ಪರದಾಟವನ್ನು ನೋಡಬಹುದು. ಅಲ್ಲಿ ಕಾಯಲು ಸಮಯವಿದ್ದಾಗ ಆ ಸಮಯವನ್ನು ಕಳೆಯಲು ಕತೆ, ಕಾದಂಬರಿಯನ್ನು ಓದಲು ಮುಂದಾಗುತ್ತಾಳೆ. ಮತ್ತೆ ಕಸಿಸ್ಟರ್ ಕರೆದಾಗ ಹೋಗಲು ಕಾಯುತ್ತಿರುತ್ತಾಳೆ. ಬೇರೆಯವರನ್ನು ಕರೆದಾಗಲೂ ನನ್ನನ್ನೇ ಕರೆಯುವರೇನೋ ಎಂಬಂತೆ

ಎಂಬಂತೆ ಕಾಯುವಳು. ಅನೇಕ ರೀತಿಯ ಗೊಂದಲದಲ್ಲಿ ತೊಡಗಿರುವುದನ್ನು ನೋಡಬಹುದು. ಅಲ್ಲದೇ ಒಬ್ಬ ಮಹಿಳೆಯು ನಗರ ಜೀವನದಲ್ಲಿ ಯಾವ ರೀತಿಯಲ್ಲಿ ಮುಂದುವರಿದಿದ್ದಾಳೆಂಬುದನ್ನು ಇವರ ಕತೆಗಳಲ್ಲಿ ನೋಡಬಹುದು. ಅಪಾಯಂಟ್‌ಮೆಂಟ್‌ಗಾಗಿ ಕಾಯುತ್ತಿರುವಾಗ ಅಲ್ಲಿ ನಡೆಯುವ ಹೊಸ ಪರಿಚಯ ಮುಖಗಳು, ಅಲ್ಲಿ ಒಬ್ಬ ಮಹಿಳೆಯು ನಡೆಸುವ ವ್ಯಾಪಾರದ ಸ್ವಭಾವವನ್ನು ನೋಡಬಹುದು. ಜನರ ಮನವನ್ನು ಸೆಳೆಯುವುದು ಒಂದು ವಿಭಿನ್ನತೆಯ ಕಳೆ ಎಂಬುದು ಅನೇಕ ಕತೆಗಳಲ್ಲಿ ನೋಡಬಹುದು. ಅಲ್ಲದೇ ದಿನನಿತ್ಯದ ಜೀವನವನ್ನು ಸಾಗಿಸಲು ಈಗ ಹಲವಾರು ರೀತಿಯಲ್ಲಿ ವಿಭಿನ್ನತೆಯನ್ನು ಹೊಂದಿರುವುದನ್ನು ನೋಡಬಹುದು.

ಕೆಲವೊಂದು ಕತೆಗಳಲ್ಲಿ ಬಡತನವು ಕಂಡುಬರುತ್ತದೆ. ಅದರಲ್ಲಿ ಮಹಿಳೆಯು ದುಡಿಯುವ ಮಹಿಳೆ ಆಗಿರುತ್ತಾಳೆ. ಓಪಿಡಿಯು ಮುಖ್ಯವಾಗಿರುತ್ತದೆ. ಈ ಕತೆಯಲ್ಲಿ ಅವಳು ಎರಡು ಆಸ್ಪತ್ರೆಯಲ್ಲಿ ತನ್ನ ಗಂಡನಿಗೆ ತೋರಿಸುವುದಾಗಿರುತ್ತದೆ. ಒಂದು ಆಸ್ಪತ್ರೆಯಿಂದ ಮತ್ತೊಂದು ಆಸ್ಪತ್ರೆಗೆ ಹೋಗಲು ಪಕ್ಕದಲ್ಲಿರುವವರಿಗೆ ಹೇಳಿ ಹೋಗುವುದು. ಮತ್ತೆ ಅಲ್ಲಿಂದ ಹಿಂದುರಿಗಿ ಬರುವುದು. ಹೀಗೆ ಅನೇಕ ರೀತಿಯ ಗೊಂದಲಗಳನ್ನು ಹೊಂದಿರುವುದನ್ನು ನೋಡಬಹುದು. ವಿಮಲಾ ಅವರ ಜೀವನವೂ ವಿಭಿನ್ನವಾಗಿರುವುದನ್ನು ನೋಡಬಹುದು.

ಬಡತನವು ಈ ಕತೆಯಲ್ಲಿ ನೋಡಬಹುದು. ಫೈವ್‌ಸ್ಟಾರ್ ಹೋಟೆಲ್‌ಗಳಲ್ಲಿ ಇಡುತ್ತಿದ್ದ ಬಣ್ಣ ಬಣ್ಣದ ಹೂವುಗಳ ಮಾರಾಟವನ್ನು ನೋಡಬಹುದು. ಬ್ಲೌಸ್‌ಪೀಸ್ ಮಾರುವಾಗ ಚಿಕ್ಕ ಮಗುವಾಗಿರುವ ಗಿರೀಶನನ್ನು ಸಂಬಾಳಿಸಿಕೊಂಡು ವ್ಯಾಪಾರವನ್ನು ಮಾಡುವುದು ನೋಡಬಹುದು. ವಿಮಲಾ ಅವರಿಗೆ ಹೆಚ್ಚು ಮಹಿಳೆಯರ ಪರಿಚಯವಾಗಿ ಅವರಿಗೆ ತನ್ನ ಬದುಕಿನ ವಿವರಗಳನ್ನು ಕೊಟ್ಟಾಗ ತನ್ನ ಗಂಡ ಸೈಕೋ ಆಗಿದ್ದಾನೆ ಎಂಬುದಾಗಿ ಹೇಳುತ್ತಾಳೆ. ನಾನು ಪ್ರಾವೆಟ್ ಆಸ್ಪತ್ರೆಯಲ್ಲಿ ತೋರಿಸಿದಾಗ ಸ್ವಲ್ಪ ಪ್ರಮಾಣದಲ್ಲಿ ಆರಾಮ ಇರುತ್ತಾರೆ. ನಂತರ ಯಥಾಸ್ಥಿತಿಯನ್ನು ತಾಳುತ್ತಾರೆ. ಅಲ್ಲಿ ತೋರಿಸಲು ಬಡತನದ ಸಮಸ್ಯೆಯು ನನ್ನದಾಗಿದೆ ಎಂಬುದಾಗಿ ವಿಮಲಾ ಅವರ ಸ್ನೇಹಿತಳಿಗೆ ಹೇಳುತ್ತಾಳೆ.

ಸಂಸಾರವನ್ನು ಸಾಗಿಸಲು ಎಷ್ಟು ಕಷ್ಟಕರವಾಗಿದೆ ಎಂಬುದನ್ನು ನೋಡಬಹುದು. ಹಾಗೆಯೇ ಜೀವನವನ್ನು ಸಾಗಿಸಲು ನಾನಾ ರೀತಿಯ ಕೆಲಸವನ್ನು ಹಿಡಿದು ಜೀವನವನ್ನು ಸಾಗಿಸಬೇಕು ಎಂಬುದನ್ನು ತಿಳಿಯಬಹುದು. ವಿಮಲಾ ಜೀವನವೂ ತುಂಬಾ ವಿಭಿನ್ನತೆಯಿಂದ ಕೂಡಿರುವುದನ್ನು ನೋಡಬಹುದು. ಅವಳ ಇನ್ನೊಂದು ಪರಿಚಯವೂ ಹಾಗೆಯೇ ಉಳಿಯುತ್ತದೆ. ಮಕ್ಕಳ ಕತೆಯನ್ನು ಹೇಳಬೇಕಾದರೆ ದೊಡ್ಡ ಕತೆಯು ಒಳಗೊಂಡಿದೆ ಅದನ್ನು ಮತ್ತೊಂದು ಸಲ ಭೇಟಿಯಾದಾಗ ವಿವರವನ್ನು ಕೊಡುತ್ತೇನೆ ಎಂಬುದಾಗಿ ಹೊರಡುತ್ತಾಳೆ.

ಮಹಿಳೆಯ ಉದ್ಯೋಗಸ್ಥಳಾಗಿರುತ್ತಾಳೆ. ಅವಳು ಮನೆಯ ಜವಾಬ್ದಾರಿಯನ್ನು ಹೊಂದಿರುತ್ತಾಳೆ. ಯಾವುದೇ ರೀತಿಯ ಕಟ್ಟುನಿಟ್ಟುಗಳಿಗೆ ಬದ್ಧಳಾಗಿರದೇ ಸ್ವತಂತ್ರ್ಯವಾಗಿ ಕೆಲಸದಲ್ಲಿ ನಿರತಳಾಗಿರುವುದನ್ನು ನೋಡಬಹುದು. ಹೆಚ್ಚಾಗಿ ಮಹಿಳೆಯ ಉದ್ಯೋಗಸ್ಥಳಾಗಿರಬೇಕೆಂದರೆ ನಗರೀಕರಣವೇ ಮುಖ್ಯವಾಗಿರುವುದನ್ನು ನೋಡಬಹುದು. ಇವರ ಕತೆಗಳಲ್ಲಿ ಹೆಚ್ಚಿನದಾಗಿ ನಗರವೇ ಕಂಡುಬರುತ್ತದೆ. ವಿಮಲಾ ಅವರು ಕತೆಯಲ್ಲಿ ತನ್ನ ಜೀವನದಲ್ಲಿ ಆಗುವಂತಹ ಅನೇಕ ರೀತಿಯ ಸಮಸ್ಯೆಗಳನ್ನು, ಪರಿಹಾರವನ್ನು ಮಾಡುವ ಗುಣವನ್ನು ಹೊಂದಿರುತ್ತಾಳೆ.

'ಸಬ್‌ವೇ ಮೂಲಕ' ಎಂಬ ಕತೆಯಲ್ಲಿ ಜೀವನ ಒಳದಾರಿಗಳನ್ನು ಚಿತ್ರಿಸಿದ್ದಾರೆ. ಸಬ್‌ವೇ ಕಳ್ಳತನ, ಕೊಲೆ, ಹೊಡೆದಾಟ ಇವು ಕಂಡುಬರುತ್ತವೆ. ಒಳ್ಳೆಯ ರೀತಿಯ ಕಾರ್ಯಗಳನ್ನು ನೋಡಲು ಸಾಧ್ಯವಿರಲಿಲ್ಲ, ಒಳ್ಳೆಯ ಕಾರ್ಯಗಳನ್ನು ನೋಡಬೇಕಾದರೆ ಮುಖ್ಯ ದಾರಿಯಲ್ಲಿ ಮಾತ್ರ ಸಾಧ್ಯವಾಗಿರುತ್ತದೆ. ಸಬ್‌ವೇ ಹೊರಡುತ್ತಿರುತ್ತಾನೆ. ಅಲ್ಲಿ ಮನುಷ್ಯನ ಜೀವನವನ್ನು ಸಾಗಿಸಲು ಬೇಕಾದಂತಹ ಅನೇಕ ದಾರಿ ಕಂಡುಬರುತ್ತವೆ. ಬಗೆಬಗೆಯ ವ್ಯಾಪಾರವನ್ನು ನೋಡಬಹುದು. ವ್ಯಾಪಾರದಲ್ಲಿ ಹಾಸ್ಯ ಬಂಗಿಯಲ್ಲಿರುವಂತಹದು ಕೋತಿಗೆ ಅಂಗಿ ಧರಿಸಿ ಅದಕ್ಕೆ ಕುಂಕುಮವನ್ನು ಧರಿಸಿ ಅದನ್ನು ಕರೆದೊಯ್ಯುವಂತಹ ಒಡೆಯ ಇದನ್ನು ಕಾಣುವಂತಹದ್ದು ಅಸೂಹೆಯಿಂದ ಇರುತ್ತದೆ. ರಿಬ್ಬನ್, ಬಳೆ, ಪಿನ್ನು, ಬಿಂದಿ, ಕರಿದಾರ ಹೀಗೆ ಹಲವಾರು ಬಗೆಯ ವ್ಯಾಪಾರವನ್ನು ನೋಡಬಹುದು. ಬಾಬಾ ಎನ್ನುವ ಜ್ಯೋತಿಷ್ಯವನ್ನು ನೋಡುವರು ಇವೆಲ್ಲಾ ಮುಖ್ಯರಸ್ತೆಯಲ್ಲಿ ಕಾಣಲು ಸಾಧ್ಯವಿರುವುದಿಲ್ಲ. ಬಾಬಾ ಅನೇಕ ರೀತಿಯ ಮದುವೆ, ಆರೋಗ್ಯ, ಪ್ರಮೋಷನ್, ಪ್ರವಾಸ ಈ ಎಲ್ಲಾ ರೀತಿಯ ಜನ ಗುಂಪುಗಳು ಹಲವಾರು ರೀತಿಯ ಮನುಷ್ಯರ ಮುಖಗಳು ಕಂಡುಬರುತ್ತವೆ. ಚಿತ್ರ ಮಾರುವಂತಹವರು, ಕಿವಿ ಚುಚ್ಚುಸಿಕೊಂಡಂತಹವರು, ಕೆಲಸದ ಸಮಯದಲ್ಲಿ ಹೋಗುವಂತಹವರು ತುಂಬಾ ರಶ್ ಆಗಿರುವಂತಹದು. ಅಲ್ಲಿ ತಂಬಾಕು ನಾತ, ಬೆವರಿನ ವಾಸನೆ, ಜನರ ಕೂಗಾಟ ಎಲ್ಲವೂ ಕಂಡುಬರುತ್ತದೆ. ಮುಂದೆ ನಿಂತಾಗ ನೂರಾರು ಜನರ ಜಂಗುಳಿ ಸೇರಿರುತ್ತದೆ. ಅದನ್ನು ಕಂಡಾಗ ಶವವನ್ನು ಒಯ್ಯುತ್ತಿರುವುದು ಕಂಡುಬರುತ್ತದೆ. ಅದು ಮುಖ್ಯರಸ್ತೆಯಲ್ಲಿ ಕಾಣಿಸುತ್ತದೆ. ಸಬ್‌ವೇ ತರಲು ಅವಕಾಶವಿರುವುದಿಲ್ಲ. ಕೆಲವೊಂದು ವ್ಯಾಪಾರ, ಜನರ ಕಿರಚಾಟ ಇವುಗಳು ಮಾತ್ರ ಸಬ್‌ವೇ ಕಾಣಲು ಸಾಧ್ಯವಾಗಿರುತ್ತದೆ. ಅದನ್ನು ವೀಕ್ಷಿಸಿ ಮನುಷ್ಯನ ಬದುಕಿನ ನೂರಾರು ದಾರಿಗಳನ್ನು ಸಬ್‌ವೇ ಕಂಡುಬರುತ್ತವೆ. ತನಗೆ ಮನುಷ್ಯನ ಹಲವಾರು ಕತೆಗಳು ಕಂಡುಬಂದಿದೆ. ಸಬ್‌ವೇ ಮುಖಾಂತರವೇ ಕಾರಣವಾಗಿರುತ್ತದೆ.

'ಕಡಲ ಹಾದಿಯಲ್ಲಿ' ಪ್ರವಾಸದ ಚಿತ್ರಣವನ್ನು ಒಳಗೊಂಡಿದೆ. ಮಹಿಳೆಯೂ ಎಲ್ಲಾ ರೀತಿಯಲ್ಲಿಯೂ ಬೇಧಭಾವವಿಲ್ಲದೆ ತನ್ನ ಇಚ್ಛೆಯ ಮೆರೆಗೆ ಜೀವನವನ್ನು ನಡೆಸುವಂತಹದು

ನೋಡಬಹುದು. ಸೋನಿ ಎಂಬುವಳು ದಮನಗೆ ಪ್ರವಾಸ ಮಾಡಲು ನಿಂತಿರುತ್ತಾಳೆ. ಅವಳ ಮುಖ್ಯ ಧ್ಯೇಯ ಪ್ರವಾಸವಾಗಿರುತ್ತದೆ. ಪ್ರವಾಸ ಮಾಡಿ ದಮನಗೆ ತಲುಪುತ್ತಾಳೆ. ಆ ಪಾರ್ಕ್‌ವೊಂದರಲ್ಲಿ ಮಾಧವನು ಇರುವಂತೆ ತನ್ನ ನೆನಪಿಗೆ ಬರುತ್ತದೆ. ಅಲ್ಲಿಂದ ಉಳಿಯಲು 'ಸಾಗರ್ ಲಾಡ್ಜ್'ಗೆ ತಲುಪುತ್ತಾಳೆ. ಅಲ್ಲಿ ರೂಂನ್ನು ಮಾಡಲು ಹೋದಾಗ ಮ್ಯಾನೇಜರ್ ಎಷ್ಟು ಜನ ಎಂದು ಕೇಳಿದಾಗ ಸಿಂಗಲ್ ಎಂಬುದಾಗಿ ಹೇಳುತ್ತಾಳೆ. ಅವನು ನೋಡುವಂತಹ ರೀತಿಯೇ ಬೇರೆಯಾಗಿರುತ್ತದೆ. ಸೋನಿ ಅನೇಕ ರೀತಿಯ ಪಾರ್ಕ್, ಬೀಚ್‌ಗಳನ್ನು ನೋಡಲು ಮುಂದಾಗುತ್ತಾಳೆ. ಸಾವಿತ್ರಮ್ಮನ ಗಂಡ ಬಿಟ್ಟು ಹೊರಟಾಗ ಅವಳಿಗೆ ೧೪ ವರ್ಷದವರಾಗಿರುತ್ತಾಳೆ. ಆ ವಿಷಯಕ್ಕೆ ಅವರ ತಾಯಿ ಹುಚ್ಚಿಯಾಗಿರುತ್ತಾಳೆ. ಸೋನಿ ಮಾಧವನನ್ನು ಹುಡುಕುವುದರಲ್ಲಿ ತೊಡಗಿರುತ್ತಾಳೆ. ಸೋನಿ ಬಸುರಿಯಾಗಿರುತ್ತಾಳೆ. ಊಟ-ತಿಂಡಿಯನ್ನು ಬಿಟ್ಟು ಅವನ ಹುಡುಕಾಟದಲ್ಲಿ ತೊಡಗಿರುತ್ತಾಳೆ. ಅವನು ಹಿಂದುರಿಗಿ ಬರುತ್ತಾನೆ ಎಂಬುದು ಆಕೆಯ ನಂಬಿಕೆಯಾಗಿರುತ್ತದೆ. ಸೋನಿ ನಂತರ ಸಾಗರ ಲಾಡ್ಜ್‌ನಿಂದ ದೇವ್ಹಾ ಬೀಚಿಗೆ ಹೊರಡುತ್ತಾಳೆ. ಅಲ್ಲಿ ಆಗುವಂತ ಅನುಭವವೂ ಉನ್ನತದಾಯಕವಾಗಿರುತ್ತದೆ. ಅಲ್ಲಿ ಅನೇಕ ರೀತಿಯ ಜನರ ವೇಷಭೂಷಣಗಳು ಮನುಷ್ಯನ ತೊಳಲಾಟಗಳು ಕಂಡು ಬರುವುದನ್ನು ನೋಡಬಹುದು. ಅಲ್ಲಿಂದ ಜಾಂಪೋಕ್ ಬೀಚ್‌ಗೆ ಹೊರಡುತ್ತಾಳೆ. ಅಲ್ಲಿಯೇ ಮೋಟರ್‌ಮನ್‌ಗೆ ಹೋಗಿರುತ್ತಾಳೆ. ಅಲ್ಲಿ ಆಗುವಂತಹ ಅನುಭಗಳು ಎಲ್ಲರನ್ನು ಮರೆಯಲು ಸಾಧ್ಯವಾಗಿರುವಂತಹವಾಗಿದ್ದವು. ಅನೇಕ ರೀತಿಯ ಚರ್ಚ, ಜೈಲನ್ನು ನೋಡಲು ಹೋಗಿರುತ್ತಾಳೆ. ಜೈಲಿನಲ್ಲಿ ಮಾಧವನನ್ನು ಹುಡುಕಲು ಪ್ರಯತ್ನಿಸುತ್ತಾಳೆ. ಆದರೆ ಮಾಧವ ಸಿಗುವುದಿಲ್ಲ. ತನ್ನ ಪ್ರವಾಸವನ್ನು ಮುಗಿಸಿ ಮನೆಗೆ ಹಿಂದುರುಗುತ್ತಾಳೆ.

ಇವರ ಕತೆಗಳಲ್ಲಿ ಪ್ರವಾಸದ ಚಿತ್ರಣವನ್ನು ಹೊಂದಿರುತ್ತದೆ.ಮನುಷ್ಯನೂ ಎಲ್ಲಾ ರೀತಿಯಲ್ಲಿಯೂ ಮುಂದುವರಿದ್ದಾನೆ ಎಂಬುದು ತಿಳಿಯುತ್ತದೆ. ಮನುಷ್ಯನ ಸಂಬಂಧಗಳು ಉತ್ತಮ ರೀತಿಯಲ್ಲಿರುತ್ತವೆ.

**ಸಿಲೋನ್ ಸುಶೀಲಾ ಹಾವಾಡಿಗ ಮೀಸೆಹೆಂಗಸು ಮತ್ತು ಇತರರು.**

ಉಮಾರಾವ್‌ರವರ ಕತೆಗಳ ರಚನೆಯಲ್ಲಿ ಯಾವುದೇ ರೀತಿಯ ತೊಡಕಿಲ್ಲದೆ ನಿಚ್ಚಳವಾದ ರಚನೆಯ ಕ್ರಮವನ್ನು ನೋಡಬಹುದು ಕಥೆಯ ನಿರೂಪಣೆಯ ತಂತ್ರವೂ ಸರಳವಾಗಿರುವುದನ್ನು ಕಾಣಬಹುದು ಸಾಮಾಜಿಕ ವಾಸ್ತವವನ್ನು ಕಲಾ ವಾಸ್ತವಕ್ಕೆ ಪರಿವರ್ತಿಸುವ ಗುಣವೂ ಕಂಡುಬರುತ್ತದೆ. ಇವರ ಕತೆಗಳಲ್ಲಿ ಹೆಣ್ಣು-ಗಂಡು ಎಂಬ ತಾರತಮ್ಯವೂ ಕಂಡುಬರುವುದಿಲ್ಲ ಹೆಣ್ಣು ವಿದ್ಯಾವಂತ ಮಹಿಳೆಯಾಗಿದ್ದು ನಗರೀಕರಣದ ಜೀವನವೂ ಚಿತ್ರಿತವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ಬದುಕಿನ ಹಲವು ಮುಖಗಳನ್ನು ನೋಡಬಹುದು. ಇವರ ಕತೆಗಳ ಶೈಲಿಯು ಸತ್ಯ ಒಂದರಿಂದ ಇನ್ನೊಂದಕ್ಕೆ ಎಳೆಯುತ್ತದೆ. ನಗರೀಕರಣದಲ್ಲಿ ಹೆಣ್ಣು ಯಾವ ರೀತಿಯ ಗೊಂದಲಗಳಿಗೆ ಸಿಗಬೀಳದೇ ಸ್ವತಂತ್ರ್ಯ

ಜೀವನ ನಡೆಸುವುದು ಕಂಡುಬರುತ್ತದೆ. ಕಥೆಗಳಿಗೆ ಆಯ್ಕೆಯಾದ ವಸ್ತು, ಸನ್ನಿವೇಶ ತುಂಬ ಪ್ರಮುಖವಾಗಿರುವುದು ತಿಳಿಯುತ್ತದೆ. ಮನುಷ್ಯ ಜೀವನವನ್ನು ಯಾವ ಯಾವ ರೀತಿಯಲ್ಲಿ ವಿಸ್ತರಿಸಿಕೊಂಡಿದ್ದಾನೆ ಎಂಬುದನ್ನು ನೋಡಬಹುದು. ವ್ಯಾಪಾರವೂ ಒಂದು ಕಲೆ ಎಂಬುದು ಹಲವಾರು ಕತೆಗಳಲ್ಲಿ ಕಾಣುತ್ತದೆ. ಪ್ರವಾಸದಲ್ಲಿ ಹೇಗೆ ಭಿನ್ನತೆಯನ್ನು ಹೊಂದಿದ್ದಾರೆ. ಎಂಬುದು ತಿಳಿಯುತ್ತದೆ. ಕೆಲವೊಂದು ಕತೆಗಳು ಹಾಸ್ಯದಿಂದ ಕೂಡಿರುತ್ತದೆ. ಮತ್ತೊಂದು ಕತೆಗಳು ನಗರೀಕರಣದ ಮಹಿಳೆಯ ನಿಜಜೀವನದ ಚಿತ್ರೀಕರಣವನ್ನು ಚಿತ್ರಿಸಿದ್ದಾರೆ. ಪುರುಷನಷ್ಟೇ ಮಹಿಳೆಯು ಸಮಾನಾಳು ಎಂಬುದು ತಿಳಿಯುತ್ತದೆ. ಇವರ ಕಥಾಸಂಕಲವವು ವೈವಿಧ್ಯತೆಯಿಂದ ಕೂಡಿರುತ್ತದೆ. ಎಲ್ಲಾ ಕಥೆಗಳು ಆಸಕ್ತಿದಾಯಕದಿಂದ ಕೂಡಿರುತ್ತದೆ. ಹೆಚ್ಚಿನದಾಗಿ ಇವರ ಕಥೆಗಳಲ್ಲಿ ಮುಂಬೈ ಪರಿಸರವನ್ನು ಹೊಂದಿರುತ್ತದೆ. ಅಲ್ಲಿನ ಬದಲಾವಣೆಯು ಮಾನವನ ಮೇಲೆ ಯಾವ ರೀತಿಯಲ್ಲಿ ಹೊಂದಿದೆ ಎಂಬುದು ತಿಳಿಯುತ್ತದೆ. ಮನುಷ್ಯನ ಸಂಬಂಧಗಳು ವಿಭಿನ್ನತೆಯನ್ನು ಹೊಂದಿರುವುದನ್ನು ನೋಡಬಹುದು. ಯಾವುದೇ ರೀತಿಯ ತಾರತಮ್ಯವು ಕಂಡು ಬರುವುದಿಲ್ಲ ಹೆಚ್ಚಿನ ಕತೆಗಳಲ್ಲಿ ಮಹಿಳೆಯು ಉದ್ಯೋಗಸ್ಥಳಾಗಿರುವುದು ಕಂಡು ಬರುತ್ತದೆ. ಇವರ ಕತೆಗಳು ಒಂದೊಂದು ಕತೆಯ ಹಿನ್ನಲೆಯು ಪ್ರಮುಖವಾಗಿ ಕಂಡುಬರುತ್ತದೆ. ಕತೆಗಳಲ್ಲಿ ರಚನೆಯಾಗಿರುವ ಹೆಸರುಗಳು ವಿಭಿನ್ನತೆಯಿಂದ ಕೂಡಿರುತ್ತವೆ.

'ಹಾತೂನಿಕಾ ಎಂಬ ಕನಸು' ಎಂಬುದರಲ್ಲಿ ಹಾತೂನಕಾ ಎಂಬ ಹುಡುಗಿಯ ಹೆಸರು ವಿಚಿತ್ರವಾಗಿರುವುದನ್ನು ನೋಡಬಹುದು. ಮುಂದುವರಿದ ದೇಶಗಳಲ್ಲಿ ಗಂಡು-ಹೆಣ್ಣಿನ ಸಂಬಂಧ ಹೇಗಿದೆ ಎಂಬುದು ತಿಳಿಯುತ್ತದೆ. ಇಲ್ಲಿ ಮೂರ್ತಿ ಎನ್ನುವರು ತಮ್ಮ ಹೆಂಡತಿಯನ್ನು ಭಾರತದಲ್ಲಿ ಬಿಟ್ಟು ಅಮೆರಿಕಾಗೆ ಕೆಲಸದ ಮೇಲೆ ಹೋಗಿರುತ್ತಾರೆ. ಒಬ್ಬ ಹುಡುಗಿಯ ಪರಿಚಯವಾಗುತ್ತಾಳೆ ಹಾತೂನಿಕಾ ಆರ್ಮೀನಿಯ ದೇಶದವಳು ಆದರೆ ಜೆನ್ನಿ ಎಂದು ಹೆಸರು ಬದಲಾವಣೆ ಮಾಡಿಕೊಳ್ಳುತ್ತಾಳೆ. ಭಾರತೀಯ ಸಂಸ್ಕೃತಿಯಲ್ಲಿ ಒಬ್ಬರನ್ನು ಮದುವೆಯಾಗಲು ಅವಕಾಶ ಹಲವಾರು ಕಟ್ಟುನಿಟ್ಟಲೆಗಳನ್ನು ಹೊಂದಿರುವುದನ್ನು ನೋಡಬಹುದು. ಜೆನ್ನಿ ಎನ್ನುವಳು ಪ್ರೀತಿ ಮಾಡಿರುತ್ತಾಳೆ. ಆತ ಅವಳ ಪ್ರಿಯತಮನ ಜೊತೆ ಮತ್ತೊಬ್ಬ ಹುಡುಗಿಯನ್ನು ಕಂಡಾಗ ಅವನನ್ನು ತೊರೆಯುತ್ತಾನೆ. ಅಷ್ಟೊತ್ತಿಗೆ ಮೂರ್ತಿಯ ಪರಿಚಯವನ್ನು ಬೆಳಸಿರುತ್ತಾಳೆ. ಮರ್ಟಿ ಎಂಬುದಾಗಿ ಕರೆಯುತ್ತಿರುತ್ತಾಳೆ ಆಕಸ್ಮಿಕವಾಗಿ ಬಂದು ನನ್ನ ಹುಡುಗ ಬೇರೊಬ್ಬ ಹುಡುಗಿಯ ಜೊತೆ ಕಾಣಿಸಿಕೊಂಡ ಎಂಬುದಾಗಿ ಅಳತೊಡಗಿ ಮರ್ಟಿಯವರ ಜೊತೆ ಸ್ನೇಹವನ್ನು ಮುಂದುವರಿಸಲು ಪ್ರಯತ್ನ ಮಾಡುತ್ತಾಳೆ. ಏನೋ ಒಂದು ನೆಪದ ಮೇಲೆ ಮಾತುಕತೆ ಬೆಲೆಸುವುದು ಹೀಗೆ ಮುಂದುವರಿಸಲು ಪ್ರಯತ್ನಸುತ್ತಾಳೆ. ಮೂರ್ತಿಯವರನ್ನು ನಿಮಗೆ ಗರ್ಲ್ ಫ್ರೆಂಡ್ ಇಲ್ಲದ ಎಂದು ಕೇಳಿದಾಗ ನನಗೆ ಮದುವೆಯಾಗಿದೆ ಎಂಬುದಾಗಿ

ಹೇಳುತ್ತಾನೆ. ಚೋಪ್ರಾಗೂ ಮದುವೆಯಾಗಿದೆ ದಿನಕ್ಕೊಂದು ಹುಡುಗಿಯ ಜೊತೆ ಸುತ್ತಾಡುತ್ತಾನೆ ನೀನ್ಯಾಕೆ ಎಂದು ಕೇಳಿದಾಗ ನಾವು ಭಾರತೀಯರು ಆ ರೀತಿಯ ಸಂಬಂಧಗಳು ಕಡಿಮೆ ಎಂಬುದಾಗಿ ಹೇಳುತ್ತಾನೆ ನಂತರ ಹೆಂಡತಿಯ ಪೋಟೋ ಟೇಬಲಿನಲ್ಲಿ ಮೇಲೆ ಇದ್ದಾಗ ಅದನ್ನು ಕಂಡು ಸುಂದರಿಯಾಗಿದ್ದಾಳೆ ಎಂಬುದಾಗಿ ಹೇಳುತ್ತಾಳೆ. ಈ ಸುಂದರಿಗೂ ಅನೇಕ ರೀತಿಯ ಬಾಯ್ ಫ್ರೆಂಡ್ಸ್ ಇರುತ್ತಾರೆ ಅವಳು ಅಲ್ಲಿ ಎಷ್ಟು ಹುಡುಗರೊಂದಿಗೆ ಓಡಾಡಿಕೊಂಡಿದ್ದಾಳೋ ಎಂಬ ಅನೇಕ ಪ್ರಶ್ನೆಗಳನ್ನು ಹಾಕುತ್ತಾಳೆ. ಮೂರ್ತಿಯವರು ಭಾರತಕ್ಕ ಹಿಂದುರುಗಿ ಬಂದಾಗ ಯೋಧನೊಬ್ಬನ ನಗ್ನ ಚಿತ್ರವನ್ನು ನೆನಪಾಗಿ ಕೊಡುತ್ತಾಳೆ ಅವಳ ಅಪ್ಪಿಗೆಯಲ್ಲಿ ಅನೇಕ ರೀತಿಯ ತಳಮಳಗಳು ಆಗುತ್ತವೆ ನಂತರ ತನ್ನ ಮನದಾಳದಲ್ಲಿ ಅನೇಕ ರೀತಿಯ ಪ್ರಶ್ನೆಗಳುಮೂರ್ತಿಯವರಿಗೆ ಮೂಡುತ್ತವೆ.

ಒಬ್ಬರೊನ್ನಬ್ಬರು ನೋಡುವ ಸಂದರ್ಶನ ಇದರಲ್ಲಿ ಇಬ್ಬರು ಹೆಚ್ಚು ಕಡಿಮೆ ವಯಸ್ಸಿನವರು ಅವಳಿಗೆ ಮೂವತ್ಮೂರು ಹತ್ತು ವರ್ಷದ ಟೀಚೆರಾಗಿ ಅನುಭವನ್ನು ಹೊಂದಿ್ರುತ್ತಾಳೆ. ಅವನಗೆ ಮೂವತ್ತೆಂಡು ವಯಸ್ಸು ಇಬ್ಬರು ನಡುವೆ ಮಾತುಕತೆಯ ಪ್ರಾರಂಭವಾಗುತ್ತೆ. ಇಬ್ಬರ ಅನಿಸಿಕೆಗಳಿಗೆ ಒಪ್ಪಿಗೆ ಕೊಡುವಾಗ ಅವನು ನಾನು ವಿಗ್ ದರಿಸುತ್ತೇನೆ ಎಂಬುದಾಗಿ ಹೇಳುತ್ತಾನೆ ವಿಗ್ ಎನ್ನುವುದು ಹಚ್ಚಿಕೊಳ್ಳುವ ವಸ್ತು ಎಂಬುದಾಗಿ ತಿಳಿದುರುತ್ತಾಳೆ. ನಾವು ಲಿಪ್‌ಸ್ಟಿಕ್ ಹಚ್ಚಿಕೊಳ್ಳೂಲ್ಲೇನು ಎಂಬುದಾಗಿ ಹೇಳುತ್ತಾಳೆ ಕೆಲವು ದಿನಗಳ ದಿನಂತರ ಮದುವೆಯಾಗುತ್ತಾಳೆ. ಆಗ ರೂಂನಲ್ಲಿ ಕೆದರಿದ ಕೂದಲನ್ನು ಪರಿಪಡಿಸಿ ವಿಗ್‌ನ್ನು ತೆಗೆದು ಸ್ಟ್ಯಾಂಡಿಗೆ ಹಾಕಿ ಕಿಟಕಿಗಳಿಂದ ಬರುತ್ತಿದ್ದ ಗಾಳಿಯಲ್ಲಿ ಅವನ್ನು ನೋಡಿದಾಗ ಒಂದು ವಿಚಿತ್ರ ಗೊಂದಲ ಉಂಟಾಗುತ್ತದೆ. ಆಗ ಅರಿವಾಗುತ್ತೆ ವಿಗ್ ಲಿಪ್‌ಸ್ಟಿಕ್‌ನಂತಲ್ಲಿ ಅದು ಕರುಗುವುದಿಲ್ಲ ಎಂಬುದಾಗಿ ಹೀಗೆ ಇವರ ಕತೆಗಳಲ್ಲಿ ಅನೇಕ ರೀತಿಯ ವಿಚಿತ್ರ. ಹಾಸ್ಯವನ್ನು ಒಳಗೊಂಡಿರುವುದು ನೋಡಬಹುದು.

'ಅಂಗಡಿ ಮನೆ' ಎಂಬ ಕತೆ ಎಂಬಲ್ಲಿ ಜೀವನದಲ್ಲಿ ಕೆಲವೊಂದು ಬದಲಾವಣೆಯ ಗುಣಗಳನ್ನು ಹೊಂದಿರುವುದನ್ನು ನೋಡಬಹುದು ಆ ಊರಿನಲ್ಲಿ ಅವರ ಮನೆಯಲ್ಲಿ ಅಂಗಡಿ ಇರುವುದರಿಂದ ಅಂಗಡಿ ಮನೆ ಎಂಬ ಹೆಸರನ್ನು ಪಡೆಯುತ್ತದೆ ಆ ಮನೆಯಲ್ಲಿ ವಸಂತ ಎನ್ನುವ ಹುಡುಗಿಯ ಜೀವನವನ್ನು ಹೊಂದಿರುತ್ತದೆ. ವಸಂತ ಎನ್ನುವಳು ಸ್ಕೂಲಿಗೆ ಹೋಗಿಬರುವವಳು ಅವರ ಸ್ನೇಹಿತರಿಗೆ ಮನೆಯೊಳಗೆ ಅವಕಾಶರುವುದಿಲ್ಲ. ಮನೆಯ ಹೊರಗೆ ಅವರ ಮಾತುಕತೆಯು ನಡೆಯುತ್ತಿರುತ್ತದೆ. ಅವರ ಅಂಗಡಿಯಲ್ಲಿ ಅನೇಕ ರೀತಿಯ ಸಮಾನಗಳೆಲ್ಲವೂ ದೊರೆಯುತ್ತಿರುತ್ತವೆ ಓದಿನಲ್ಲಿ ಉತ್ತಮವಾಗಿರುವುದಿಲ್ಲ ಕೆಲವೊಂದು ವಿಷಯದಲ್ಲಿ ಫೇಲ್ ಆಗಿರುತ್ತಾಳೆ. ಅವರ ಸ್ನೇಹಿತರು ಅವಳನ್ನು ಕರೆಯಲು ಮನೆಗೆ ಬಂದಾಗ ಒಂದು ವಾರ ಸ್ಕೂಲಿಗೆ ಬರುವುದಿಲ್ಲ

ಎಂಬುದಾಗಿ ಅವರ ತಾಯಿ ಉತ್ತರವನ್ನು ಕೊಡುತ್ತಾಳೆ. ಅವಳಿಗೆ ಆರತಿ ಇದೆ ಖಂಡಿತಾ ಬರಬೇಕು ಎಂದು ಹೇಳುತ್ತಾಳೆ. ಅಂದು ಸಂಜೆ ಚಪ್ಪರ, ಹಸಿರುತೋರಣ, ರೇಷ್ಮೆಸೀರೆ, ಒಡವೆ ಎಲ್ಲವನ್ನು ಧರಿಸಿರುತ್ತಾಳೆ ವಸಂತಾ ಊಟ ಎಲ್ಲವನ್ನು ಮುಗಿಸಿ ಹೊರಗೆ ಬಂದಾಗ ಅಂಗಡಿ ಮನೆಯ ಬಾಗಿಲು ತೆರೆದಿರುತ್ತವೆ. ವಸಂತಾ ಸ್ನೇಹಿತರು ಮದುವೆಯಾಗಿ ಮುಂಬೈ ಸೇರಿ ಕೆಲವೊಂದು ದಿನಗಳ ನಂತರ ಹಿಂದುರಗಿ ಬಂದಾಗ ಗುರುತುಹಿಡಿಯಲು ಆಗುವುದಿಲ್ಲ ಒಂದು ಆಶ್ಚರ್ಯಕರ ಸುದ್ಧಿಯು ಬರುತ್ತದೆ. ವಸಂತಾ ಅವರ ಅಣ್ಣ ಪರಿಚಯವಾಗುತ್ತದೆ ವಸಂತಾಳನ್ನು ಕೇಳಿದಾಗ ತೀರ್ಕೊಂಡರು ಎಂಬುದಾಗಿ ಹೇಳುತ್ತಾನೆ. ಹೀಗೆ ಕತೆಯ ಕೊನೆಯಲ್ಲಿ ಮಹತ್ವ ಕುರಿತು ತಿಳಿಸುತ್ತದೆ. ಹೆಚ್ಚಿನದಾಗಿ ವ್ಯಾಪಾರದ ಮನೋಭಾವು ಹೆಚ್ಚಿನದಾಗಿ ಕಂಡುಬರುತ್ತದೆ.

'ಗುದ್ದು' ಎಂಬ ಕತೆಯಲ್ಲಿ ಒಬ್ಬರಿಗೊಬ್ಬರು ಪರಿಚಯವಿಲ್ಲದೆ ನಡೆಯುವ ಘಟನೆಯನ್ನು ನೋಡಬಹುದು. ನಂದೂ ಎನ್ನುವರ ಅವರಿಗೆ ದೊಡಪ್ಪನಾಗಿರುತ್ತಾನೆ. ಕಾಟನ್ ಬಟ್ಟೆಯನ್ನು ಧರಿಸುತ್ತಾನೆ. ಕಂಪನಿಯೊಂದರಲ್ಲಿ ಅಕೌಂಟಂಟ್ ಆಗಿ ಕೆಲಸಮಾಡುತ್ತಾನೆ. ಸೈಕಲ್‌ನಲ್ಲಿಯೇ ಅವರ ಓಡಾಟವಾಗಿರುತ್ತದೆ. ರಜಾದಿನಗಳು ಧಾವಿಸಿದಾಗ ಅವರ ಮನೆಗೆ ಹೋಗುವುದು ಅವರ ಜೊತೆಯಲ್ಲಿ ಕತೆ ಕಾದಂಬರಿ ಪುಸ್ತಕಗಳನ್ನು ಒಯ್ಯುವುದು ಮಧ್ಯಾಹ್ನ ಊಟದ ಸಮಯದಲ್ಲಿ ಅನೇಕ ರೀತಿಯ ಕತೆಗಳನ್ನು ಹೇಳುವಂತಹದು ಅವರೆಲ್ಲಾ 'ಬಿಯರ್' ಕುಡಿಯುವ ವಿಚಾರವನ್ನು ಹೇಳಿದಾಗ ಅವನ್ನೆಲ್ಲಾ ನಾವಲ್ಲಾ ಪೊಲೀಸರು ಕುಡಿಯುವುದು ಎಂಬುದಾಗಿ ಹೇಳುತ್ತಾನೆ. ಅವನನ್ನು ಎಲ್ಲರೂ ಜಿಪುಣ ಎಂಬುದಾಗಿ ಕರೆಯುತ್ತಾರೆ. ಅವನು ಮನೆಗೆ ಬರುವಾಗ ಸೈಕಲಿನಲ್ಲಿ ಜಗಳವು ನಡೆಯುತ್ತಿರುತ್ತದೆ ಅದು ಇವನಿಗೆ ಸಂಬಂಧವೇ ಇರುವುದಿಲ್ಲ ಆದರೂ ಸೈಕಲಿನಿಂದ ಇಳಿದು ಅವರಿಗೂ ಇವರಿಗೂ ಗುದ್ದುಗಳನ್ನು ಕೊಟ್ಟು ಬರುತ್ತಾನೆ. ಇಂತಹ ಅನೇಕ ರೀತಿಯ ಸನ್ನಿವೇಶಗಳು ಕತೆಯ ನಿರೂಪಣೆಯಲ್ಲಿ ನೋಡಬಹುದು ಕೆಲವೊಂದು ಹಾಸ್ಯದಿಂದ ಕೂಡಿದ್ದರೆ ಕೆಲವು ಗಂಭೀರತೆಯಿಂದ ಕೂಡಿರುತ್ತವೆ. ಅನೇಕ ರೀತಿಯ ಆಶ್ಚರ್ಯಕರವಾದ ಘಟನೆಗಳನ್ನು ಇವರ ಕತೆಗಳಲ್ಲಿ ನೋಡಬಹುದು. ನಂತರ ಅಮ್ಮ ಫೋನ್ ಮಾಡಿ ನಂದೂ ದೊಡ್ಡಪ್ಪ ಹೋಗಿ ಬಿಟ್ರು ಎಂಬ ಮಾತನ್ನು ಹೇಳುತ್ತಾಳೆ ಈ ರೀತಿಯ ಆಶ್ಚರ್ಯಕ ಘಟನೆಗಳನ್ನು ಇವರ ಕತೆಗಳಲ್ಲಿ ನೋಡಬಹುದು.

ಇವರ ಕತೆಗಳಲ್ಲಿ ನಗರೀಕರಣ ಚಿತ್ರಣ ಹೊಂದಿರುವುದರಿಂದ ವೈನ್ ಎಂಬುದು ಕಂಡು ಬರುತ್ತದೆ. ಹಗುರತೆ ಹೀಗೆ ಕತೆಯಲ್ಲಿ ಕಂಡುಬಂದಿದೆ ಎನ್ನುವುದು ತಿಳಿಯುತ್ತದೆ. ರಾಗಿಣಿ ವಾನ್ಸ್ ಎಂಬುದು ಒಂದು ಶಾಪ್ ಅದರಲ್ಲಿ ನಾನಾ ರೀತಿಯ ವೈನ್ಸ್‌ನ್ನು ಒಳಗೊಂಡಿರುತ್ತದೆ. ಅದರ ಪಕ್ಕದಲ್ಲಿಯೇ ಇನ್ನೊಂದು ಅಂಗಡಿಯನ್ನು ಹೊಂದಿರುತ್ತದೆ. ವೈನ್‌ನ್ನು ಕೊಳ್ಳಲು ಹೋದವರು ಅದೇ ಶಾಪಿಗೆ ಹೋಗಿದ್ದಾರೆ ಎಂಬುದನ್ನು ತಿಳಿಯಲು ಆಗುವುದಿಲ್ಲ. ಹಗುರ ಎಂಬ ಕತೆಯಲ್ಲಿ

ಒಬ್ಬ ಪ್ರತಿ ಶನಿವಾರ ವೈನ್ ಕೊಳ್ಳಲು ಹೋದಾಗ ಅದಕ್ಕೂ ಅವನಿಗೂ ಸಂಬಂಧವಿಲ್ಲದಂತೆಯೇ ನಡೆಯುತ್ತಾನೆ. ಕೌಂಟರಿನಲ್ಲಿ ಹಣವನ್ನು ಕೊಟ್ಟ ಪಕ್ಕದ ಇನ್ನೊಂದು ಅಂಗಡಿಗೆ ಹೋಗುತ್ತಾನೆ. ಕೌಂಟರಿನವನು ಒಂದು ಗ್ಲಾಸಿಗೆ ವೈನ್ ಸುರಿದು ಕೊಡುತ್ತಾನೆ ಅದನ್ನು ಬೇಗ ಕುಡಿಯುತ್ತಾನೆ ಮನೆಗೂ ಒಯ್ಯುತ್ತಾನೆ. ಕಪ್ಪು ಪ್ಲಾಸ್ಟಿಕ ಚೀಲದಲ್ಲಿ ಮಡಿಸಿ ಒಯ್ಯುತ್ತಾನೆ ಮನೆಗೆ ಸೇರುತ್ತಾನೆ ಪೋನ್ ಬಂದರೆ ತಲೆನೋವು ಮಲಗಿರವನೆಂದು ಹೇಳಲು ಹೆಂಡತಿಗೆ ಹೇಳುತ್ತಾನೆ. ವಾನ್ ಕೊಟ್ರೆ ನೀಲಿ ಪ್ಯಾಂಟಿನವ ಹಗುರತೆ ಪದೇ ಪದೇ ಮನಸ್ಸಿನಲ್ಲಿ ಬರುತ್ತಿರುತ್ತಾನೆ. ಈ ಕತೆಗಳಲ್ಲಿ ಕುಡಿಯುವುದು ಸಾಮಾನ್ಯವಾಗಿರುವುದು ಕಂಡು ಬರುತ್ತದೆ. ಮುಂದುವರಿದ ದೇಶಗಳಲ್ಲಿ ಇದು ಸಾಮಾನ್ಯ ಕಂಡು ಬರುವುದನ್ನು ನೋಡಬಹುದು.

'ಕಪ್ಪುಬ್ರಾ ಎನ್ನುವುದು ಒಂದು ಈ ಕತೆಯಲ್ಲಿ ವಿಶೇಷತೆಯನ್ನು ಹೊಂದಿರುವುದು ನೋಡಬಹುದು ಕಪ್ಪು ಬ್ರಾ ಎನ್ನುವ ಮಾತೆತ್ತಿದರೆ ಸಾಕು ಅಮ್ಮ ಅವರಿಗೆ ಅದು ಸರಿಯಲ್ಲ ಅನ್ನುವ ದೃಷ್ಟಿ ಅವರ ಮನದಾಳದಲ್ಲಿರುತ್ತದೆ. ಗಂಡನನ್ನು ಕಳೆದುಕೊಂಡು ಕಷ್ಟದಿಂದ ಮಗಳನ್ನು ಬೆಳಸಿರುತ್ತಾಳೆ ಮಗಲು ಏನಾದರೂ ಮಾತಾಡಿದರೆ ನಿಗಗೆ ಏನು ಗೊತ್ತು ನಾನು ಎಷ್ಟು ಕಷ್ಟದಿಂದ ನಿನ್ನನ್ನು ಒಳಸದೀನಿ ಎಂಬುದಾಗಿ ಹೇಳುತ್ತಾಳೆ. ಕಪ್ಪು ಬ್ರಾ ಬಗ್ಗೆ ಮಾತಾಡಿದರೆ ನಾನು. ನಿಮ್ಮ ಶಾರಾದಮ್ಮ ಟೀಚರ, ಜಾನಿಕಿ ಅತ್ತೆ ಯಾರ್ದ್ರು ಹಾಕಾತಾರೆ ಎಂದು ಸವಾಲೆಸೆಯುತ್ತಾಳೆ ಮದುವೆಯಾದ ಮೇಲೆ ಯಾವುದಾದರೂ ಹಾಕೊ ಎಂಬುದಾಗಿ ಹೇಳುತ್ತಾಳೆ ಇದರಲ್ಲಿ ಕಪ್ಪು ಬ್ರಾ ಎನ್ನುವುದೇ ಒಂದು ವಿಶೇಷತೆ ಹೊಂದಿದೆ.

ಚಾರ್ಲಿ ಎಂಬ ಕತೆಯಲ್ಲಿ ಚಾರ್ಲಿ ಎನ್ನುವನು ತುಂಬಾ ಕುಳ್ಳನಾಗಿರುತ್ತಾನೆ. ಅವನು ಹಾಗೆ ಇರುವುದರಿಂದ ಅವರ ತಂದೆ – ತಾಯಿ ಅವನನ್ನು ಸರ್ಕಸನವರ ಟೆಂಟಿನ ಬಳಿ ಬಿಟ್ಟು ಹೋಗುತ್ತಾರೆ. ಅವನನ್ನು ಬೆಳೆಸುತ್ತಾರೆ ಅಲ್ಲಿ ಸರ್ಕಸನಲ್ಲಿ ಪುಟಾಣಿ ಪುಟಾಣಿ ಎಂದು ಕರೆದು ಪುಟಾಣಿ ಚಾರ್ಲಿಯಾಗಿ ಉಳಿಯುತ್ತಾನೆ. ಅಲ್ಲಿ ಸರ್ಕಸ್‌ನಲ್ಲಿ ಅನೇಕ ರೀತಿಯಲ್ಲಿ ಆಟಗಳನ್ನು ಆಡುವುದರಲ್ಲಿ ಮುಂದಿರುತ್ತಾನೆ. ಕೆಲವು ಸರ್ಕಸಗಳನ್ನು ಮಾಡುವುದರಲ್ಲಿ ಮುಂದಿರುತ್ತಾನೆ. ಎರಡು ವರ್ಷಗಳ ಹಿಂದೆ ಅಮೆರಿಕಾದವನು ಭೇಟಿಕೊಟ್ಟರುತ್ತಾನೆ ಅವನು ನಿಮ್ಮಂಥವರನ್ನು ಅಮೆರಿಕಾದಲ್ಲಿ ಉದ್ದ ಹುಡುಗಿಯರು ಮದುವೆಯಾಗುತ್ತಾರೆ ಎಂಬ ವಿಚಾರವನ್ನು ಹೇಳಿರುತ್ತಾನೆ. ಅಲ್ಲಿ ಯಾರೂ ನಿಮ್ಮಂಥವರನ್ನು ಹೀನಾಯ ಮಾಡುವುದಿಲ್ಲ ಎಂಬುದಾಗಿ ಹೇಳುತ್ತಾನೆ. ಮೇರೀನೇ ತನ್ನನ್ನು ಮದುವೆಯಾದರೆ ಸಾಕು ಅವಳಿಗೆ ಎಲ್ಲಾ ರೀತಿಯ ಸಹಾಯವನ್ನು ನಾನು ಮಾಡುತ್ತೇನೆ ಎಂದು ಹೇಳುತ್ತಾನೆ ಊಟ, ತಿಂಡಿ, ಸಪ್ಲೈ ಮಾಡುವುದು ಹಲವಾರು ರೀತಿಯಲ್ಲಿ ಅಲ್ಲಿ ನೆಟ್‌ಗಳನ್ನು ಕಟ್ಟಿದರೆ ಅವನ್ನು ಚೆಕ್ ಮಾಡುವುದು ಈ ರೀತಿಯಲ್ಲಿ ಕೆಲಸದಲ್ಲಿ ತೊಡಗಿರುತ್ತಾನೆ ಇವನನ್ನು

ಪುಟಾಣಿ ಎಂದು ಕರೆದರೆ ನನ್ನ ಚಾರ್ಲಿ ಎಂಬುದಾಗಿ ಹೇಳುತ್ತಾನೆ. ಅವನ ಜೀವನವು ಟಂಟಿನಲ್ಲಿಯೇ ಸಾಗುತ್ತಿರುತ್ತದೆ ಹೀಗೆ ಹಲವಾರು ರೀತಿಯ ಕತೆಗಳು ಹಾಸ್ಯದಿಂದ ಕೂಡಿರುತ್ತಾರೆ ಹೀಗೆ ಎತ್ತರದವರು ಕುಳ್ಳಿನವರು ಎಂಬ ಬೇದಭಾವವನ್ನು ಹೊಂದಿರುತ್ತಾರೆ ಅವರನ್ನು ನೋಡುವ ದೃಷ್ಟಿಕೋನವೇ ಬೇರೆಯಾಗಿರುತ್ತದೆ. ಕುಳ್ಳಿನವರಲ್ಲಿ ಅನೇಕ ರೀತಿಯ ಬುದ್ಧಿಶಕ್ತಿಯನ್ನು ಹೊಂದಿರುವುದನ್ನು ನೋಡುಬಹುದು. ಒಂದೊಂದು ಕತೆಯಲ್ಲಿಯೂ ಒಂದು ರೀತಿಯ ಗ್ರಹಿಕೆಯು ವಿಭಿನ್ನತೆಯತೋರುತ್ತದೆ. ವಿದೇಶಗಳ ನಡುವೆ ಯಾವ ರೀತಿಯ ವ್ಯತ್ಯಾಸ ಹೊಂದಿದೆ ಎಂಬುದು ತಿಳಿಯುತ್ತದೆ. ಕತೆಗಳು ಕತೆಗಳ ವಸ್ತು, ಸನ್ನಿವೇಶ ವೈವಿಧ್ಯತೆಯಿಂದ ಕೂಡಿರುವುವನ್ನು ನೋಡಬಹುದು.

'ಹೊಂಗೆ ಮರದ' ಕತೆಯಲ್ಲಿ ಒಟ್ಟು ಕುಟುಂಬದಲ್ಲಿ ಬೆಳೆದವರು ಪೂರ್ವಿಕರ ಮಾತಿನಂತೆ ಮೂಢನಂಬಿಕಯನ್ನು ನೋಡಬಹುದು. ಹಿರಿಯರು ಹೊಂಗೆಮರದಡಿಯಲ್ಲಿ ಹಣವನ್ನು ಹೂತಿಟ್ಟಿದ್ದಾರೆ. ಅದನ್ನು ಕಾಯಲು ಸರ್ಪವಿದೆ ಎಂಬ ಮಾತುಗಳು ಹಿರಿಯರು ನಿಧನ ನಂತರ ಆ ಜಾಗಕ್ಕಾಗಿ ಅನೇಕ ರೀತಿಯಲ್ಲಿ ಕಿತ್ತಾಟಗಳು ಜಗಳಗಳು ಕಂಡುಬರುತ್ತವೆ. ಹಿರಿಯರು, ವಕೀಲರು ಸೇರಿ ಅದನ್ನು ಸಮಪಾಲು ಮಾಡಿ ಬೇಲಿಯನ್ನು ಹಾಕುತ್ತಾರೆ. ಅವರಿಬ್ಬರಲ್ಲಿ ದ್ವೇಷ ಹೆಚ್ಚಾಗುತ್ತದೆ. ಯಾವುದೇ ಕೆಲಸ ನಡೆದರೂ ಕಾರ್ಯಮಾಡಿದರೂ ಹೊಂಗೆಮರದಡಿಯಲ್ಲಿ ಸಿಕ್ಕ ಹಣವೇ ಕಾರಣ ಎಂಬುದು ಅವರ ವಾದಲಾಗಿತ್ತು. ಕೆಲವು ದಿನಗಳ ನಂತರ ಆ ಜಾಗ ರಿಯಲ್ ಎಸ್ಟೇಟನ ಕಣ್ಣಲ್ಲಿ ಬಿದ್ದು ಅದನ್ನು ಕೆಡವಿ ಕಮ್ರ್ಯುಯಲ್ ಕಾಂಪ್ಲೆಕ್ಸ್ ಕಟ್ಟಲು ಪ್ಲಾನ್ ಮಾಡಿದರೂ ಹಾಗೆ ವಿದೇಶದಲ್ಲಿ ಹುಡುಗರಿಗೆ ಕರೆಹೋಗಿ ಅವರು ಅದರಿಂದ ಅನೇಕ ರೀತಿಯ ಲಾಭವನ್ನು ಪಡೆಯುತ್ತಾರೆ ಮೊದಲು ಮೂಢನಂಬಿಕೆಯನ್ನು ಪಡೆದಿದ್ದು ನಂತರ ಮೂಢನಂಬಿಕೆಯಲ್ಲಿ ಅವರ ಮಹತ್ವ ಏನು ಎಂಬುದು ನಂತರ ಅರಿವಾಗುತ್ತದೆ.

ಮನುಷ್ಯನ ಬದುಕಿನ ಹಲವು ದಾರಿಗಳನ್ನು ನೋಡಬಹುದು. ಒಂದೇ ಮನೆಯಲ್ಲಿ ಹಲವಾರು ವಾಸಿಸುವ ಚಿತ್ರಣವನ್ನು ಅವರವರು ತಮ್ಮ ತಮ್ಮ ಕೆಲಸದಲ್ಲಿ ನಿರತರಾಗಿರುವುದನ್ನು ನೋಡಬಹುದು. ಮನೆಯ ಅನೇಕ ಘಟನೆಗಳು ಪ್ರಸ್ತಾಪವಾಗುತ್ತವೆ. ದಿನದ ದುಡಿತ ಮುಗಿಸಿ ಬಂದ ಗುಂಡ್ಯಾ, ಮುನ್ನಾ ಪೋಖರೆ ದಿಲೀಪ ಹಲವಾರು ಮುಖಗಳು ಪರಿಚಯವಾಗುತ್ತವೆ. ಸುರೇಖಾ ಪರಿಚಯವಾಗಿ ಪ್ರತಿ ಭಾನುವಾರವೂ ಇವರ ಓಡಾ ಓಡಾಟ ಇವರ ಪ್ರೀತಿ–ಪ್ರೇಮಗಳು ಬೆಳೆಯುತ್ತವೆ. ಅದಕ್ಕೆ ಸುರೇಖಾ ನಿನನ್ನು ನೋಡಿಕೊಳ್ಳುವುದೇ ಕಷ್ಟ ನನನ್ನು ಏನು ನೋಡಿಕೊಳ್ಳುತ್ತೀಯ ಎಂಬ ಮಾತುಗಳು ಬರುತ್ತವೆ. ಅಮ್ಮ ಒಳ್ಳೆಯ ಕೆಲಸದಲ್ಲಿ ನಿರತರಾಗಿರುತ್ತಾನೆ ಎಂದು ಭಾವಿಸುತ್ತಾರೆ. ಇವನು ಬಿದಿರಿನಲ್ಲಿ ಹಲವಾರು ರೀತಿಯ ವಸ್ತುಗಳನ್ನು ಮಾಡಿ ಮಾರುವುದು ಹವ್ಯಾಸವಾಗಿರುತ್ತದೆ. ಕಡಲಕಡೆಗೆ ಹೋದಾಗ ನೀರನಲ್ಲಿ ಕೊಚ್ಚಿ ಬರುತ್ತಿದ್ದ ನೀರಿನಲ್ಲಿ ಹಲವಾರು ವಸ್ತುಗಳು ಕೊಚ್ಚಿಬರುತ್ತವೆ.

ಸೈಕಲುಗಲು ಸಾಲಾಗಿ ನಿಂತಿರುತ್ತವೆ ಗಾಳಿಗೆ ಒಂದರ ಮೇಲೊಂದು ಬಿದ್ದಾಗ ಗುಂಡ್ಯಾ ನಗತೊಡಗಿದ. ಹೀಗೆ ಹಾಸ್ಯವನ್ನು ಹೊಂದಿರುತ್ತವೆ.

'ಮುಬ್ಬು' ಎಂಬ ಕತೆಯಲ್ಲಿ ಗಂಡ-ಹೆಂಡತಿಯವರ ಪ್ರೇಮವನ್ನು ನೋಡಬಹುದು ಗಂಡ ಅಮೆರಿಕಾದಲ್ಲಿ ಕೆಲಸದಲ್ಲಿರುತ್ತಾನೆ. ಹೆಂಡತಿಯ ಹಳ್ಳಿಯಲ್ಲಿರುತ್ತಾಳೆ. ಅವನು ಇವಳು ಸಂಪ್ರದಾಯಸ್ತರಾಗಿ ಬೆಳೆದಿರುತ್ತಾಳೆ. ಗಂಡ ಅಮೆರಿಕಾದಿಂದ ಹಿಂದುರುಗಿ ಬಂದಾಗ ಹೊಸ ಹೊಸ ಉಡುಗೆ-ತೊಡುಗೆಗಳನ್ನು ತಂದಿರುತ್ತಾನೆ ಅವನ್ನು ಹಾಕಿಕೊಳ್ಳಲು ಮುಜುಗರವನ್ನು ಹೊಂದಿರುತ್ತಾಳೆ. ತರ ತರದ ನೈಟಿಗಳು ನೈಟ ಕ್ಲಬಿನ ಚಿತ್ರಗಳು ಬಣ್ಣ ಬಣ್ಣದ ಬ್ರಾಗಳು ಹಲವಾರು ತಂದಿರುತ್ತಾನೆ ಇವುಗಲು ಅವಳಲ್ಲಿ ಮುಜುಗರವನ್ನು ತರುತ್ತವೆ. ಅವನು ಮತ್ತೆ ಟೂರಿಗೆ ಹೋದಾಗ ಅವನ್ನು ಮೂಲೆಗೆಸದು ಮೆತ್ತೆನೆಯ ಕೈಮಗ್ಗದ ಸೀರೆಯನ್ನು ಸುತ್ತಿಕೊಂಡು ನೆಮ್ಮದಿಯುತವಾಗಿರುತ್ತಾಳೆ. ಹೀಗೆ ನಗರ ಜೀವನ, ಹಳ್ಳಿಯವರ ಜೀವನದ ನಡುವೆ ಯಾವ ರೀತಿಯ ವ್ಯತ್ಯಾಸವನ್ನು ಹೊಂದಿದೆ ಎಂಬುದನ್ನು ನೋಡಬಹುದು.

'ಮೂಲೆಮನೆ' ಎಂಬ ಕತೆಯಲ್ಲಿ ಜಯಾ ಮತ್ತು ಲೀಲಾ ಪರಿಚಯವಾಗುತ್ತದೆ. ಈ ಕತೆಯಲ್ಲಿ ವಯಸ್ಸಿನ ಅಂತರವೇ ಸಂಬಂಧವನ್ನು ಬೆಳಸಲು ಕಂಡುಬರುತ್ತದೆ. ಜಯಾಳ ಒಳ್ಳೆಯ ಸ್ವಭಾವವು ಕಂಡು ಬರುತ್ತದೆ. ತಾಯಮ್ಮ ಮನೆಯ ಕೆಲಸಮಾಡಲು ಬಂದ ಆಕೆಯ ಮಗಳಾಗಿರುತ್ತಾಲೆ. ಅವಳು ಮೂಲೆಮನೆಯ ಜಯ, ಮೂಲೆ ಮನೆಯ ಚಂದ್ರಪ್ಪ, ಮೂಲೆಮನೆಯ ನಿರ್ಮಲಮ್ಮ ಜಯ ಅವರ ಸ್ನೇಹಿತರಿಗೆ ಹೆಚ್ಚಿನದಾಗಿ ತಾಯಿಯ ಅನಿಸಿಕೆಗಳನ್ನು ಹೇಳುತ್ತಿರುತ್ತಾಳೆ ತಂದೆಯ ಪ್ರಸ್ತಾಪವನ್ನು ಮಾಡುವುದಿಲ್ಲ ಸ್ನೇಹಿತರು ಕೇಳಿವಾಗ ಸುಮ್ಮನಾಗುತ್ತಾಳೆ. ಒಂದು ಲೀಲಾ ಅವರ ಮನೆಗೆ ಚಿಕ್ಕ ಬ್ಯಾಗ್‌ನೊಂದಿಗೆ ಬಂದಾಗ ಜಯಾ, ತಾಯಿ ಊರಿನ ಹೊರಗೆ ಬಾಡಿಗೆ ಮನೆಗೆ ಬರುತ್ತಾರೆ ಸ್ಕೂಲಿಗೆ ಹೋಗುವುದನ್ನು ಬಿಡುತ್ತಾಳೆ. ಲೀಲಾ ಕೆಲವು ದಿನಗಳ ನಂತರ ಜಯಾ ಜೀವನದಲ್ಲಿ ಬದಲಾವಣೆಗಳು ಆಗುತ್ತವೆ ಎಲ್ಲರ ಸಂಪರ್ಕವೂ ಕಡಿಮೆಯಾಗುತ್ತದೆ ಸೋದರ ಮಾವನ್ನು ಮದುವೆಯಾಗಿ ಅಮೇರಿಕಾಗೆ ಹೊರಡುತ್ತಾಳೆ. ಲೀಲಾ ಮೇಲೆ ದ್ವೇಷದಿಂದ ಕೂಡಿತ್ತು ತಂದೆಯ ನಿಧನ ಸುದ್ದಿ ತಿಳಿದುಬಂದಾಗ ಎದುರಗಡೆಯು ಇದ್ದರೂ ಏನು ಮಾತಾಡಲು ಆಗುವುದಿಲ್ಲ ಇವರ ಕತೆಗಳ ನಿರೂಪಣೆಯು ಮಹತ್ವವಾಗಿರುವುದನ್ನು ನೋಡಬಹುದು. ಲೀಲಾ ಜಯಾ ಇವರ ನಡುವೆ ಯಾವುದೇ ರೀತಿಯ ತಕರಾರುಗಳು ಇಲ್ಲದೇ ನಿಶ್ಯಬ್ದತೆಯು ಕಂಡುಬರುವುದು ನೋಡಬಹುದು.

'ಲಿಟ್ಲ್'ಇಟಲಿಯಲ್ಲಿ ಇಟಲಿಯನ್ನು ಕುರಿತು ವಿಸ್ತಾರ ಮಾಡಲಾಗಿದೆ. ಅಲ್ಲಿನ ಪರಿಸರ ಅಂದರೆ ಆಸ್ಪತ್ರೆ ಶಾಲಾಕಾಲೇಜುಗಳು ಹೊಸರೀತಿಯಲ್ಲಿ ಕಂಡು ಬಂದ ಮನೆಗಳು ದಿನ ಬೆಳಗಾದರೆ

ನಡೆಯುವ ಜಂಜಾಟಗಳು ಹಲವಾರು ಕಂಡುಬರುತ್ತವೆ. ಫ್ರಿಜ್, ರೈಲು ಹಲವಾರು ರೀತಿಯ ವಸ್ತುಗಳು ಕಾಣುತ್ತವೆ ಇವೆಲ್ಲವೂ ಮುಂದುವರಿದ ನಗರೀಕರಣದ ಬದಕನ್ನು ಸೂಚಿಸುತ್ತಿದೆ. ಇವರ ಕತೆಗಳು ವಸ್ತುವೇ ನಗರೀಕರಣವಾಗಿರುತ್ತದೆ. ಮುಂದುವರೆದ ದೇಶದಲ್ಲಿ ಜನರ ಸ್ಥಿತಿಗತಿಗಳು ಹೇಗೆ ಎಂಬುದನ್ನು ಕತೆಗಳಲ್ಲಿ ತಿಳಿಯಬಹುದು.

'ಸಿಲೋನ್ ಸುಶೀಲಾ' ಎನ್ನುವ ಕತೆಯಲ್ಲಿ ಅವಳಿಗೆ ಆ ಹೆಸರು ಬರಲು ಕಾರಣ ಸಿಲೋನ್ ಆಕಾರದ ಕಂದು ಬಣ್ಣದು ಮಟ್ಟಿ ಅವರ ಕ್ಲಾಸಿನಲ್ಲಿ ದೊಡ್ಡವಳಾಗಿದ್ದು ಎಲ್ಲರಿಗಿಂತಲೂ ಎತ್ತರವಾಗಿದ್ದಳು ಗಂಗುರು ಕೂದಲನ್ನು ಹೊಂದಿರುವಳು ಕೈತುಂಬಾ ಗಾಜಿನ ಬಳೆಯನ್ನು ಬೆಳ್ಳಿ ಉಂಗುರ ದಟ್ಟ ಬಣ್ಣಗಳ ಕಾಟನ್ ಲಂಗದಾಣಿಯನ್ನು ಹಾಕಿರುವಳು ವಿಲಾಸಿನಿ ಟೀಚರ್ ಸ್ಕೂಲಿನಲ್ಲಿ ಪ್ರಸಿದ್ಧಿಯನ್ನು ಪಡೆದಿರುತ್ತಾಳೆ ಅವರು ನಡೆದಹೋದ ದಾರಿಯಲ್ಲಿ ಉಳಿದಿರುತ್ತಿದ್ದ ಸುಗಂಧ ಪರಿಚಯ ಎಲ್ಲರಿಗೂ ಪರಿಚಯವಾಗುತ್ತಿತ್ತು. ಅವರ ಸೀರೆ, ಕಾಟನ್ ರವಿಕೆ, ಚೂಪು ಬ್ರಾ ನಡೆ ಮೆಲುಮಾತುಗಳು ಆಕರ್ಷಕವಾಗಿರುತ್ತಿದ್ದವು. ಆದರಿಂದ್ದ ಎಲ್ಲರಿಂದಲೂ ಪ್ರಸಿದ್ಧಿಯನ್ನು ಪಡೆದಿದ್ದರು. ವಿಲಾಸಿನಿ ಮೇಡಂ ಅವರ ಮನೆಯ ಪಕ್ಕದಲ್ಲಿ ಸುಶೀಲಾ ಅವರ ಮನೆಯಿತ್ತು ಅವರ ಚಟುವಟಿಕೆಗಳೆಲ್ಲಾ ನನಗೆ ಗೊತ್ತು ಎಂಬುದಾಗಿ ಹೇಳುತ್ತಿದ್ದಳು ಮನೆಯಲ್ಲಿ ಸಿಂಡ್ರೆಲ್ಲಾ ಥರಾ ತೆಲುವಾದ ಫ್ರಾಕು ಧರಿಸುತ್ತಾರೆ ಪೌಂಡ್ಸ್ ಫೌಡರ್ ಎಂದರೆ ಪ್ರಾಣ. ಅನೇಕ ಸುದ್ದಿಗಳನ್ನು ಹೇಳುತ್ತಿರುತ್ತಾಳೆ. ವಿಲಾಸನ ಟೀಚರ್ ಒಂದು ದಿನ ರೇಶ್ಮೀಸೀರೆ ಉಟ್ಟು ಸ್ಕೂಲಿಗೆ ಬಂದಾಗ ಎಲ್ಲರೂ ಕಂಗ್ರಾಟ್ಸ ಹೇಳುವರು ಮತ್ತೆ ೧೫ ದಿನಗಳ ನಂತರ ಒಂದು ವಾರ ಸ್ಕೂಲಿಗೆ ಬರದಿದ್ದಾಗ ಇನ್ನೊಬ್ಬರ ಸಂಬಂಧವಿತ್ತಂತೆ ಆದರಿಂದ ವಿಲಾಸಿನಿ ಟೀಚರ್ ನೇಣು ಹಾಕಿಕೊಂಡು ಪ್ರಾಣವನ್ನು ಕಳೆದುಕೊಂಡಿರುತ್ತಾಳೆ. ಕೆಲವು ವರ್ಷಗಳ ನಂತರ ಸುಶೀಲಾರವರ ಸ್ನೇಹಿತರೊಂದಿಗೆ ಹೀಗೆ ಆಗಬಾರದಿತ್ತಲ್ಲಾ ಮತ್ತೇ ಪ್ರಸ್ತಾಪವಾಗುತ್ತದೆ. ಮನುಷ್ಯ ಹೀಗೆ ಬದಲಾವಣೆಯ ಗುಣವನ್ನು ಹೊಂದಿರುತ್ತಾನೆ ಎಂಬುದನ್ನು ತಿಳಿಯುತ್ತದೆ. ಹಲವಾರು ಘಟನೆಗಳು ಒಂದರಿಂದ ಇನ್ನೊಂದಕ್ಕೆ ವಿಭಿನ್ನವಾಗಿರುವುದನ್ನು ನೋಡಬಹುದು.

'ಹೀಗಿಬ್ಬರು' ಕತೆಯಲ್ಲಿ ಮದುವೆಯ ಮಂಟಪದಲ್ಲಿ ಕುಳಿತಾಗ ಹಳೆಯ ನೆನಪುಗಳು ಕಾಡುತ್ತಿರುತ್ತವೆ. ಮದುವೆಯಾಗಿ ಹೆಂಡತಿ ಮಗ ಇದ್ದರೂ ಕೆಲವು ನೆನಪುಗಳು ಹಾಗೆಯೇ ಉಳಿದಿರುವುದು ಕಾಣಿಸುತ್ತವೆ. ಮನೆಯಲ್ಲಿ ಎಲ್ಲಾ ರೀತಿಯ ಸುಖದ ಸುಪ್ಪತ್ತಿಗೆಯಲ್ಲಿ ಜೀವನವನ್ನು ಮುಂದುವರಿಸುತ್ತಿದ್ದರೂ ಹಳೆಯ ನೆನಪು ಬರುತ್ತ ಊರಿನ ಪರಿಸರ ಅಲ್ಲಿ ನಡೆಯುವ ಘಟನೆಗಳು ಕಣ್ಣುಮುಂಚಿ ಬರುತ್ತಿರುತ್ತವೆ ಅಪ್ಪು ಕೈಹಿಡಿದು ಅಂಗಡಿಗೆ ಕರೆಯ್ಯುವಾಗ ಏಳು ವರ್ಷದವನಾಗಿರುತ್ತಾನೆ ಲೀನ್‌ಸಿಡ ಆಯಿಲ್ ಇವೆಲ್ಲವೂ ನೆನಪು ಬರುತ್ತವೆ ಊರಿನ ನೆನಪು ಆದಾಗಲೆಲ್ಲಾ ಹಳೆಯ ನೆನಪುಗಲು ಬರುತ್ತವೆ. ನಗರದಲ್ಲಿದ್ದು, ಹಳ್ಳಿಯ ಚಿತ್ರಣ ಚಿತ್ರಿಸಕೊಳ್ಳುವುದನ್ನು ಕಾಣಬಹುದು.

'ಹಕ್ಕಿ' ಎಂಬ ಕತೆಯಲ್ಲಿ ದುಡಿಯುವ ಮಕ್ಕಳ ಸ್ವಭಾವವು ಕಂಡು ಬರುತ್ತದೆ. ಬೇದಭಾವವು ಕಂಡು ಬರುತ್ತದೆ. ಸುನೀತಾ ಎನ್ನುವರು ಶ್ರೀಮಂತರಾಗಿರುತ್ತಾರೆ. ಅವರ ಗಂಡ ಉದ್ಯೋಗದಲ್ಲಿರುತ್ತಾರೆ. ತಾಯಿ, ಮಗ ಸುನೀತಾ ಇಬ್ಬರೂ ಒಟ್ಟಿಗೆ ಇರುತ್ತಾರೆ. ಲೀನಾಳ ಅವರ ಮಗ ಬಹುದೂರ್ ಆಗಿರುತ್ತಾನೆ. ಅವನನ್ನು ಮುಂಬೈಗೆ ಕರೆದೊಯ್ಯಲು ಹೇಳುತ್ತಾಳೆ. ಅವರ ಮನೆಯಲ್ಲಿ ಕೆಲಸವನ್ನು ಬಹದೂರ್ ಮಾಡುತ್ತಿರುತ್ತಾನೆ. ಮುಂಬೈಗೆ ಹೋಗಲು ಕೆಲವೊಂದು ಪ್ರವಾಸ ಸ್ಥಳಗಳನ್ನು ನೋಡಲು ಹೊರಡುತ್ತಾರೆ. ಟೈಗರ್ ಹಿಲ್ ಎಂಬ ಸ್ಥಳದಲ್ಲಿ ಬಹದೂರ್ ಫ್ಲಾಸ್ಕ್‌ನಲ್ಲಿ ಟೀಯನ್ನು ಹಿಡಿದು ಮಾರಲು ಮುಂದಾಗುತ್ತಾನೆ. ಸುನೀತಾ ಅವರು ಕೊಂಡು ಹಣ ಕೊಡಲು ಮುಂದಾದಾಗ ಬೇಡ ಎಂದು ಹೊರಡುತ್ತಾನೆ. ಸುನೀತಾ ಚಿಂಟೂನ ತಾಯಿಯೊಂದಿಗೆ ಬಿಟ್ಟು ಒಂಟಿನ ಎಳೆದುಕೊಂಡು ಮಾರುಕಟ್ಟೆಗೆ ಹೊರಡುವಾಗ ಎಲ್ಲಾ ರೀತಿಯ ವಸ್ತುಗಳನ್ನು ಎಲ್ಲರಿಗೂ ಕೊಳ್ಳುರುತ್ತಾರೆ ಬಂಟ ಬಹುದೂರಿಗೆ ಎಂದು ಕೇಳಿದಾಗ ಮುಂದಿನ ಅಂಗಡಿಯಲ್ಲಿ ಎಂದು ಹೇಳಿರುತ್ತಾಳೆ ಅಲ್ಲಿ ಮನದಲ್ಲಿ ನೋವು ಉಂಟಾಗುತ್ತದೆ. ನಂತರ ಮಹಾಕಾಳಿ ದೇವಸ್ಥಾನಕ್ಕೆ ಎಲ್ಲರೂ ಖುಷಿಯಾಗುತ್ತಾರೆ. ಶೈವ ದೇವಸ್ಥಾನದ ಎದುರು ಬಂದು ಗುಂಪೊಂದು ಕೂಡಿರುತ್ತದೆ. ಹುಡುಗನ ಕೈಯಲ್ಲಿ ಚೀಲದಲ್ಲಿ ಪಂಜರದಲ್ಲಿ ಪಾರಿವಾಳವು ಕಂಡುಬರುತ್ತದೆ. ಆ ಪಾರಿವಾಳವನ್ನು ಪೂಜಿಸಿ ಆವರ ಸ್ವತಂತ್ರ್ಯವಾಗಿ ಹೊರಬಿಡುತ್ತಾರೆ. ಸುನೀತಾ ಮನಸ್ಸಿನಲ್ಲಿ ಗೊಂದಲ ಉಂಟಾಗಿ ಬಹುದೂರನ್ನು ನೋಡಿದಾಗ ದೂರದಲ್ಲಿ ಹಚ್ಚ ಹಸಿರಿನ ನಡುವೆ ಗುಡ್ಡವನ್ನು ಇಳಿಯುವುದು ಕಂಡುಬರುತ್ತದೆ. ಸುನೀತಾ ಮಕ್ಕಳೊಂದಿಗೆ ಮುಂಬೈಗೆ ಹೊರಡುತ್ತಾಳೆ. ಬಹುದೂರನನ್ನು ಅಲ್ಲಿಯೇ ಬಿಡುತ್ತಾರೆ. ಮನುಷ್ಯರ ಸ್ವಭಾವ ವಿಚಿತ್ರವಾಗಿರುವುದು ಕಾಣುತ್ತದೆ. ಮೇಲು-ಕೀಳು ಅನೇಕ ರೀತಿಯೆ ಭಾವನೆಗಳು ಕಂಡುಬರುತ್ತದೆ. ಮನುಷ್ಯ ಮುಂದುವರಿದಷ್ಟು ಅಸೂಹೆ ಇರುವುದಿಲ್ಲ ಎಂದು ಭಾವಿಸುವುದು ತಪ್ಪಾಗುತ್ತದೆ. ಬಹೂದೂರ ಒಬ್ಬಂಟಿಯಾಗಿರುವುದನ್ನು ನೋಡಬಹುದು. ಈ ಕತೆಯಲ್ಲಿ ಹಕ್ಕಿಯು ಶ್ರೇಷ್ಟತೆಯು ಕಂಡುಬರುತ್ತದೆ.

'ಮಂಜು' ಎಂಬ ಕತೆಯಲ್ಲಿ ಮಾಲಾದೇವಿಯ ಪಾತ್ರವು ಪ್ರಮುಖವಾಗಿರುತ್ತದೆ. ಸೂರ್ಯೋದಯ ನೋಡಲು ಕಾಂಚನಂಗ ಪರ್ವತವು ಪ್ರಸಿದ್ಧಿಯಾಗಿರುತ್ತದೆ. ಪ್ರವಾಸವು ಹೋಗಿರುತ್ತಾರೆ ರಾತ್ರಿಯಲ್ಲಿ ಹೋಟಲಿನಲ್ಲಿ ಉಳಿದುಕೊಂಡು ಮುಂಜಾನೆ ೩ ಗಂಟೆಗೆ ಸುರ್ಯೋದಯ ನೋಡಲು ಹೋಗಿರುತ್ತಾರೆ ಆ ಹೊತ್ತಲ್ಲಿ ಮಂಜು ಮಸುಕಾಗಿರುತ್ತದೆ. ಅಲ್ಲಿ ಚಳಿಯಲ್ಲಿ ಎಲ್ಲರೂ ಮಫರ್, ಟೋಪಿ ಎಲ್ಲರೂ ಹಾಕಿರುತ್ತಾರೆ. ಕಾಫಿಯ ಮಾರಾಟವು ಹೆಚ್ಚಾಗಿರುತ್ತದೆ. ಅಲ್ಲಿ ವ್ಯಾಪಾರವು ಲಾಭದಾಯಕವಾಗಿರುತ್ತದೆ. ಅಲ್ಲಿಂದ ಹೋಟಲಿಗೆ ಹೋದಾಗ ಮೈರಾದೇವಿಯ ದರ್ಶನವು ಪೇಪರಿನಲ್ಲಿ ಬಂದಿರುತ್ತದೆ. ಅವರನ್ನು ಹುಡುಕಿ ಹೋದಾಗ ಮನೆಯು ಸಿಗುತ್ತದೆ. ಅಲ್ಲಿ ವಾಚ್‌ಮನ್, ಮನೆಯ ಮುಂದೆ

ಹೂ ತೋಟ ಎಲ್ಲವೂ ಕಂಡುಬರುತ್ತದೆ ಮೈರಾದೇವಿಯನ್ನು ಭೇಟಿಯಾಗಲು ಕೇಳಿದಾಗ ಅವರು ಧ್ಯಾನದಲ್ಲಿದ್ದಾರೆ ಸಂಜೆ ಬನ್ನಿ ಎಂದು ಹೇಳುತ್ತಾರೆ. ಕೆಲವು ದಿನಗಳ ನಂತರ ಅಲ್ಲಿ ಇರುವ ಕಲಾಕೃತಿಯ ವಸ್ತುಗಳು ಮಾಂತ್ರಿಕತೆಯ ವಸ್ತುಗಳು ಬೆಂಗಳೂರಿಗೆ ಪ್ರದರ್ಶನಕ್ಕೆ ಬರುತ್ತವೆ. ಅವನು ಪ್ರದರ್ಶನಕ್ಕೆ ಸಮಯವು ಮೀರಿ ಎಲ್ಲವನ್ನು ಪ್ಯಾಕ ಮಾಡಿರುತ್ತಾರೆ. ಮೈರಾದೇವಿಯು ಆಭರಣಗಳನ್ನು ಧರಿಸಿ ತುರಬ ಕಟ್ಟಿ ಬೆಂಗಾಲಿ ಸೀರೆಯನ್ನು ಧರಿಸಿರುತ್ತಾಳೆ. ಆದರೆ ಮೈರಾದೇವಿಯನ್ನು ಮಾತಾಡಿಸಲು ಆಗುವುದಿಲ್ಲ ಹೊರಗೆ ನಡೆದಾಗ ಮುಂಬೈ ಕರಗಿರುತ್ತದೆ.

'ಘಲ್ ಘಲ್ ಘಲ್' ಎಂಬ ಕತೆಯಲ್ಲಿ ಗೆಜ್ಜೆಯ ಶಬ್ಧದ ಹುಡುಗಿಯ ಕಥೆಯನ್ನು ಒಳಗೊಂಡಿದೆ. ಅವರು ತರಕಾರಿ ಮಾರಿ ಜೀವನವನ್ನು ನಡೆಸುತ್ತಿರುತ್ತಾರೆ. ತರಕಾರಿಮಾರಲು ಹೊರಾಟಾಗಿ ಜನಗಳ ಅನೇಕ ರೀತಿ ಬದುಕಿನ ರೀತಿಗಳನ್ನು ನೋಡಬಹುದು. ಸ್ಕೂಲಿನ ಮಕ್ಕಳ ಓಡಾಟ ಜನರ ಗುಂಪುಗಳು, ಕೆಲಸಕ್ಕೆ ಹೋಗುವವರು ಅನೇಕ ರೀತಿಯ ಪರಿಚಯಸಿಗುತ್ತದೆ. ಘಲ್ ಘಲ್ ಎನ್ನುವ ಹುಡುಗಿ ತುಂಬಾ ಮುಗ್ಧತೆಯಿಂದ ಇರುವುದು ಕಂಡುಬರುತ್ತದೆ. ಹೊರಗಿನ ಪ್ರಪಂಚದ ಜ್ಞಾನದ ಅರಿವು ಕಡಿಮೆಯಿರುತ್ತದೆ. ಬಿಸಲಿನಲ್ಲಿ ಗಾಡಿಯನ್ನು ಅವರನ್ನು ತಳ್ಳಿಕೊಂಡು ಹೋಗುತ್ತಿರಬೇಕಾದರೆ ಗೆಜ್ಜೆಯ ಶಬ್ದವು ಬರುತ್ತದೆ. ಅವರ ತಂದ ಗಾಡಿಯತ್ತರ ನಿಲ್ಲಿಸಿ ಹೊರಗೆ ಹೋದಾಗ ಕೆಂಪುಬಸ್ಸು ಕಾಣಿಸುತ್ತಲೆ ಅದರಲ್ಲಿ ಪ್ರಯಾಣಿಸುತ್ತಿರುವ ಪ್ರಯಾಣಿಕರು ಇವಳು ಬಗ್ಗಿ ಬಗ್ಗಿ ನೋಡುವುದನ್ನು ಕಂಡು ಕರೆಯುತ್ತಾರೆ. ಅವರ ಪರಿಚಯವು ಸಿಗುತ್ತದೆ ಅಲ್ಲಿ ಹೊಸ ರೀತಿಯ ಅನುಭವವಾಗುತ್ತದೆ. ಮೆತ್ತನೆಯ ಸೋಫಾ, ಸಂಗೀತ, ಮೊಬೈಲ್‌ಗಳು ಎಲ್ಲವೂ ಕಂಡು ಆಶ್ಚರ್ಯಕರವಾಗುತ್ತಾಳೆ. ಆ ಪರಿಸರವನ್ನು ಕಂಡು ಕಂಗಾಲಾಗುತ್ತಾಳೆ ಬೆವರು ತೊಡಗುತ್ತಾಳೆ ನೀರು ಬೇಕಾ, ಎಂದು ಕೇಳಿದಾಗ ಬೇಕು ಎಂದು ನೀರಡಿಕೆಯನ್ನು ತೀರಿಸಿಕೊಳ್ಳುತ್ತಾಳೆ. ಬಸ್ಸಿನಲ್ಲಿಯೂ ಘಲ್ ಘಲ್ ಶಬ್ದವೂ ಬರುತ್ತದೆ. ತಂದೆಯು ಮಗಳನ್ನು ಹುಡುಕಾಡುತ್ತಿದ್ದಾಗ ಬಸ್ಸಿನ ಬಾಗಿಲು ತೆಗೆದು ಹೊರಬರುತ್ತಾಳೆ. ತಂದೆಯೂ ಕೋಪಗೊಂಡು ಹೊಡೆಯುತ್ತಾನೆ. ಈ ಕತೆಯಲ್ಲಿ ಏನೂ ಅರಿಯದ ಮುಗ್ಧತೆಯ ಚಿತ್ರಣವೂ ಕಂಡುಬರುತ್ತದೆ. ಅವಳಿಗೆ ಹೊರಗಿನ ಪ್ರಪಂಚದ ಅರಿವು ಕಡಿಮೆಯಿರುವುದು ತೋರುತ್ತದೆ. ಇದಕ್ಕೆ ಕಾರಣ ಗ್ರಾಮೀಣ ಬದುಕಿನ ಚಿತ್ರಣ ಕಾರಣವಾಗಿರುತ್ತದೆ.

'ಬ್ಯೂಟಿ ಪಾರ್ಲರಿ'ನಲ್ಲೊಂದು ಎಂಬ ಕತೆಯಲ್ಲಿ ಮಧ್ಯಾಹ್ನ ಒಂದು ಘಟನೆಯು ನಡೆಯುತ್ತದೆ. ಲವ್‌ಲೀನ್ ಎನ್ನುವಳು ಅಲ್ಲಿನ ಕೆಲಸಮಾಡುವವಳಾಗಿರುತ್ತಾಳೆ ಅವಳು ಕೆಲಸದಲ್ಲಿ ನಿರತರಾಗಿರುವಾಗ ಮನೆಯಲ್ಲಿ ನಡೆಯುವ ಅನೇಕ ಘಟನೆಗಳು ನೆನಪಿಗೆ ಬರುತ್ತವೆ. ಲವ್‌ಲೀನ್ ಆಕೆಯ ಬಂದಿರುವ ಕಸ್ಟಮೇರಗೆ ಹೇರ್ ಡೈ ಹಚ್ಚಿ ಬೆನ್‌ಬೆನ್‌ಳ ಜೊತೆ ಹರಟೆ ಹೊಡೆಯುತ್ತಿರುತ್ತಾಳೆ. ಅಲ್ಲಿನ ಪಕ್ಕದ ಮನೆಯವರು ವಿಷಯವನ್ನೆಲ್ಲಾ ಪ್ರಸ್ತಾಪ ಮಾಡುತ್ತಿರುತ್ತಾರೆ. ರೀಟಾ ಅನ್ನುವವಳು ಮಧ್ಯವಯಸ್ಕ

ಮಹಿಳೆಯು ಪಾದಗಳು ಹೊಡೆದಿರುತ್ತವೆ ಇವರು ಬೇಡ ಅಂದರೂ ಮಸಾಜ್ ಮಾಡಿಸಿಕೊಳ್ಳುತ್ತಾರೆ ಅದರಿಂದ ಚರ್ಮವು ಕಿತ್ತು ಹೋಗುತ್ತದೆ. ಆದ್ದರಿಂದ ರಕ್ತವು ಹರಿಯತೊಡಗುತ್ತದೆ. ಬಾಸ್ ಮತ್ತು ರೀಟಾ ನಡುವೆ ಜಗಳ ಉಂಟಾಗುತ್ತದೆ. ರೀಟಾ ಆಕೆಯ ಪಾದಗಳ ಮೇಲೆ ಕೈ ಮಾಡಿದಾಗ ತಳ್ಳುತ್ತಾಳೆ. ಬಾಸ್ ರೀಟಾಳನ್ನು ಕಿತ್ತು ತೆಗೆಯಲು ನಿಶ್ಚಯಿಸುತ್ತಾರೆ. ಯಾವುದೇ ಒಂದು ಕೆಲಸವನ್ನು ಅದರ ಕಡೆ ಹೆಚ್ಚಿನ ಗಮನವನ್ನು ಕೊಟ್ಟು ಮಾಡಿದಾಗ ಮಾತ್ರ ಉತ್ತಮವಾಗಲು ಕಾರಣವಾಗುತ್ತದೆ ಹೀಗೆ ಹಲವಾರು ರೀತಿಯ ಘಟನೆಗಳು ಸಂಭವಿಸುತ್ತವೆ.

'ಮೀಸೆ ಹೆಂಗಸು' ಎಂಬ ಕತೆಯಲ್ಲಿ ಯಾವುದು ಶಾಶ್ವತವಲ್ಲ ಎಲ್ಲಾ ನಶ್ವರ ಎಂಬುದು ತಿಳಿಯುತ್ತದೆ. ಅವಳು ಸೀರೆಯನ್ನು ಉಡುವುದರಲ್ಲಿ ಮೊದಲಿಗರಾಗಿರುತ್ತಾಳೆ. ಮನೆಯಲ್ಲಿ ಎಲ್ಲರೂ ಮಹಿಳೆಯವರು ಇರುವುದರಿಂದ ಇವಳಿಗೆ ಸೀರೆಕೊಳ್ಳುವ ಅವಶ್ಯಕವಿಲ್ಲ ಎಂದು ತಾಯಿ ಭಾವಿಸುತ್ತಿದ್ದಳು ಮನೆಯಲ್ಲಿ ಏನಾದರೂ ಕಾರ್ಯಕ್ರಮವಾದರೂ ಅಕ್ಕ, ಅತ್ತೆ, ಅಮ್ಮ ಯಾರೋರೊಬ್ಬರ ಸೀರೆಯನ್ನು ಹಾಕಬೇಕಿತ್ತು. ಅವಳಿಗೆ ಮದುವೆಯಾಗುತ್ತೆ ಎರಡನೆ ಹೆಂಡತಿಯಾಗಿ ಮೊದಲನೆ ಹೆಂಡತಿ ತೀರಿಕೊಂಡಿರುತ್ತಾಳೆ. ಇವಳು ಹೋದಾಗಿನಿಂದ ಎಲ್ಲಾ ರೀತಿಯ ಕಲರ್ ಕಲರ್ ಸೀರೆಗಳನ್ನು ತರುತ್ತಾನೆ ಆಕೆಯ ಮಾನವೊಲಿಸಲು ಅವರಿಗೆ ಮಕ್ಕಳು ಆಗುವುದಿಲ್ಲ ಒಬ್ಬಂಟಿಯಾಗಿರುತ್ತಾಳೆ ಅಮ್ಮ, ಅಪ್ಪ ಎಲ್ಲಾರೂ ತೀರಿಕೊಂಡಿರುತ್ತಾರೆ ಒಂದು ದಿನ ಗಂಡ ಕುರ್ಚಿಯ ಏನೋ ಲೆಕ್ಕವನ್ನು ಬರೆಯತ್ತಿರಬೇಕಾದರೆ ಹಾಗೆಯೇ ಪ್ರಾಣವನ್ನು ಬಿಟ್ಟಿರುತ್ತಾನೆ. ಇವಳು ಏಕಾಂಗಿಯಾಗುತ್ತಾಳೆ ಆ ಸೀರೆಗಳು ಉಡುವುದರಲ್ಲಿಯೂ ಅವಳು ಇರುವುದಿಲ್ಲ. ಅನಾಥಶ್ರಮವನ್ನು ಸೇರುತ್ತಾಳೆ ಆರೋಗ್ಯವು ಉತ್ತಮವಾಗಿರುವುದಿಲ್ಲ ಹೀಗೆ ಹೆಣ್ಣು ಹಲವಾರು ರೀತಿಯ ಸಮಸ್ಯೆಗಳನ್ನು ಪರಿಹರಿಸಬೇಕಾಗುತ್ತದೆ. ಈ ಎಲ್ಲಾ ಕತೆಗಳು ಒಂದೊಂದು ರೀತಿಯ ವಿಭಿನ್ನತೆಯನ್ನು ಹೊಂದಿರುವುದನ್ನು ನೋಡಬಹುದು. ಉಮಾರಾವ್‌ರವರ ಕತೆಗಳಿಗೆ ಆಯ್ಕೆಯಾದ ವಸ್ತು ವೈವಿಧ್ಯತೆಯಿಂದ ಕೂಡಿರುತ್ತವೆ. ಈ ಕತೆಗಳು ಭಾಗ ಒಂದರಲ್ಲಿ ಕಂಡುಬರುತ್ತವೆ.

ಮುಂದಿನ ಕತೆಗಳನ್ನು ಭಾಗ ಎರಡರಲ್ಲಿ ನೋಡಬಹುದು 'ಹಾವಾಡಿಗ' ಎಂಬ ಕತೆಯಲ್ಲಿ ನಡೆದ ಘಟನೆಯನ್ನು ಒಳಗೊಂಡಿದೆ. ಬೆಂಗಳೂರಿನಲ್ಲಿ ದಕ್ಷಿಣ ವಲಯದಲ್ಲಿ ಐಶಾರಾಮಿ ವಸತಿಗಳಲ್ಲಿ ಸ್ವರ್ಗ ಅಪಾರ್ಟ್‌ಮೆಂಟ್ ಒಂದಾಗಿತ್ತು. ನೂರು ಮನೆಗಳನ್ನು ಒಳಗೊಂಡಿದೆ. ಅಲ್ಲಿ ವಾಸಿಸುವರಿಗೆ ಯಾವುದೇ ರೀತಿಯ ಕುಂದುಕೊರತೆಗಳು ಕಂಡುಬರುವುದಿಲ್ಲ. ಮಕ್ಕಳು ಆಟ ಆಡಲು ಈಜುಕೊಳ, ಟೆನ್ನಿಸ್, ಕ್ಲಬ್‌ರೇಸ್, ಹೂ-ಗಿಡ ಪೆಪ್ಸಿ, ಕಿಟ್‌ಕ್ಯಾಟ್, ಇವುಗಳನ್ನು ಒಳಗೊಂಡ ಅಂಗಡಿಯೂ ಇರುತ್ತದೆ. ೨೪ ಗಂಟೆಗಳು ಕರೆಂಟ್ ವ್ಯವಸ್ಥೆ ಸೆಕ್ಯೂರಿಟಿ ಗಾರ್ಡುಗಳು ಕೆಲಸಮಾಡಲು ಬರುತ್ತಿದ್ದವರು ಕನ್ನಡ ಜೊತೆಗೆ ತಮಿಳು, ಹಿಂದಿಯನ್ನು ಮಾತಾಡುತ್ತಿದ್ದರು. ಸ್ವರ್ಗ ಕಾಂಪ್ಲೆಕ್ಸ್‌ನಲ್ಲಿ ವಿಭಿನ್ನ ರೀತಿಯ

ಸಂಸಾರಗಳು ಒಳಗೊಂಡಿರುತ್ತವೆ. ಸಣ್ಣಪುಟ್ಟ ಕಾರ್ಖಾನೆಗಳು ಮಾಲೀಕರು ವಿದೇಶಕ್ಕೆ ತಮ್ಮ ಮಕ್ಕಳನ್ನು ಕಳಿಸಿಕೊಟ್ಟ ದಂಪತಿಯರು, ಪತ್ರಕರ್ತರು, ಟಿವಿ ಸಿರಿಯಲ್ ನಿರ್ಮಾಪಕರು ಹೀಗೆ ಅನೇಕ ರೀತಿಯ ಜನರನ್ನು ಒಳಗೊಂಡಿತ್ತು ಆಗಾಗಿ ಸಣ್ಣಪುಟ್ಟ ಗೊಂದಲಗಳು ಸಹ ನಡೆಯುತ್ತಿದ್ದವು ಮತ್ತೆ ಎಲ್ಲರೂ ಬೆರೆತು ಗುಡ್‌ಮಾರ್ನಿಂಗ್, ಗುಡ್‌ನೈಟ್ ಎಂದು ಹೇಳಿಕೊಂಡು ಓಡಾಡುತ್ತಿದ್ದರು. ಆ ಅಪಾರ್ಟ್‌ಮೆಂಟ್‌ನಲ್ಲಿ ಏನಾದರೂ ಗೊಂದಲಗಳು ನಡೆದಾಗ ಅದನ್ನು ಸರಿಮಾಡಲು ವಾರಕ್ಕೊಂದು ಸಮಾವೇಶವು ನಡೆಯುತ್ತಿತ್ತು. ಹೀಗೆ ಒಂದು ದಿನ ಭಾನುವಾರ ಅಲ್ಲೋಲ ಕಲ್ಲೋಲಗೊಳಿಸಿತು. ಸೆಕ್ರಟರಿ ರಾಧಕೃಷ್ಣನ ಬಳಿ ವಿಚಿತ್ರ ವೇಷದವನೊಬ್ಬ ಕಾಣಿಸಿಕೊಂಡ ದಟ್ಟವಾದ ಮೀಸೆ, ಹಣೆಯಲ್ಲಿ ವಿಭೂತಿ, ಕತ್ತಿನಲ್ಲಿ ಬಣ್ಣ ಬಣ್ಣದ ಮಣಿಗಳು ತಾಯಿತ ಈ ರೀತಿಯ ವೇಷವನ್ನು ಧರಿಸಿರುತ್ತಾನೆ. ಎಲ್ಲರೂ ಏನೋ ಹಾವಾಡಿಗನನ್ನು ಒಳಗೆ ಬಿಟ್ಟಿದ್ದೀರಿ ಎಂದು ಕೇಳಿದಾಗ, ಇಲ್ಲ ಬಾಡಿಗೆಗೆ ಬಂದಿರುವರು ಎಂಬುದಾಗಿ ಅಡ್ಮಿನಿಸ್ಟ್ರೇಟಿವ್ ಶಶಿಧರ ಉತ್ತರಿಸುತ್ತಾನೆ. ಅದು ಒಂದು ತರಹದ ಶಾಕ್ ಆಗಿರುತ್ತದೆ. ರಾಧಕೃಷ್ಣನ ಹಾಗೆ ಶಶಿಧರನನ್ನು ಪಕ್ಕಕ್ಕೆ ಕರೆದು ಶಶಿಧರ ನಾನು ಎಲ್ಲಾ ರೀತಿಯಲ್ಲಿಯೂ ಚೆಕ್‌ಮಾಡಿದ ಸಾರ್‌ವ್ಯಾಲಿ ಆಗುತ್ತೆ ಎಂದು ಉತ್ತರಿಸುತ್ತಾನೆ. ಮನೆಯ ಓನರ್ ಅವರಿಗೆ ಬರೆದಿರೋ ಕಾಗದಾನೂ ಜೊತೆಗೆ ತಂದಿರುತ್ತಾನೆ. ಬೇಕಾದರೆ ನಿಮಗೆ ನಂಬಿಕೆ ಇಲ್ಲದಿದ್ದರೆ ಫೋನ್‌ಮಾಡಿ ಕೇಳಿ ಅವರು ಅಮೆರಿಕಾಗ ಹೋಗಿದ್ದಾರೆ ಎಂಬ ವಿಷಯ ಹೇಳುತ್ತಾನೆ.

ಹಾವಾಡಿಗ ಒಂದು ಸುದ್ಧಿ ಅಪಾರ್ಟ್‌ಮೆಂಟ್‌ಗೆ ಒಂದು ಹೊಸ ಹಾಗೂ ವಿಶೇಷ ಸುದ್ಧಿಯಾಗಿರುತ್ತದೆ. ಹಾವಾಡಿಗ ಬೇಟಿಕೊಟ್ಟಾಗ ಕಾಂಪ್ಲೆಕ್ಸನ ರಿಜಿಸ್ಟರಿನಲ್ಲಿ ಶಂಭು ವಯಸ್ಸು ಮೂವತ್ತು ವೃತ್ತಿ ಹಾವಾಡಿಗ ಎಂಬುದಾಗಿ ತುಂಬಿರುತ್ತಾನೆ. ಇದನ್ನು ನೋಡಿ ಎಲ್ಲರೂ ಆಶ್ಚರ್ಯರಾಗಿರುತ್ತಾರೆ ಅಲ್ಲಿ ವಾಸಿಸುವರೆಗೂ ಎಲ್ಲರಲ್ಲೂ ಮಾತುಕತೆಯೂ ನಡೆಯುತ್ತದೆ. ಮಕ್ಕಳಿಗೂ ಎಚ್ಚರಿಕೆಯನ್ನು ವಹಿಸುತ್ತಾರೆ ಅವನು ಪೆಪ್ಪರ್‌ಮಿಂಟ್ ಚಾಕಲೇಟ್ ಏನೇ ಕೊಟ್ಟರೆ ತಗೋಬಾರದು ಎಂಬ ಎಚ್ಚರಿಕೆಯು ಮಾಡುತ್ತಾರೆ ಮನೆಯ ಕೆಲಸದವರು ಸಹಿ ಅವನ ಮನೆಯಲ್ಲಿ ಕೆಲಸ ಮಾಡಲು ಭಯ ಬೀಳುತ್ತಾರೆ. ಮಾಟ-ಮಂತ್ರ ಮಾಡುತ್ತಾನೆ ಎಂಬುದಾಗಿ ಒಂದೇ ಒಂದು ಮನೆ ಕೆಲಸ ಮಾಡುತ್ತಿದ್ದ ಮುದುಕಿ ಮಾತ್ರ ಕನಿಕರವನ್ನು ತೋರಿಸುತ್ತಾಳೆ. ಅವನು ಹಾವಾಡಿಗನಾದರೇನು ಅವನೂ ಯಾರಿಗೂ ತೊಂದರೆ ಕೊಡದೆ ಅವನ ಕೆಲಸವನ್ನು ಅವನು ಮಾಡುತ್ತಿದ್ದಾನಲ್ಲವಾ ಎಂದು ಹೇಳಿದಾಗ ಎಲ್ಲರೂ ಅವಳ ಕಡೆ ಅಸೂಯೆಯ ರೀತಿಯಲ್ಲಿ ಅವಳನ್ನು ನೋಡುತ್ತಾರೆ.

ಆ ಕಾಂಪ್ಲೆಕ್ಸಗೆ ಯಾರೇ ಹೊಸದಾಗಿ ಬಂದರೂ ಹಾಲಿನವರು ಹಾಲು ಹಾಕುತ್ತಿದ್ದರು. ಅವರೊಬ್ಬರಿಗೆ ಮಾತ್ರ ಪರ್ಮಿಶನ್ ಕೊಡಲಾಗಿತ್ತು. ಹಾಲಿನವನು ಕರೆಗಂಟೆಯನ್ನು ಒತ್ತಿದಾಗ ಶಂಭು ಭೇಟಿಯಾಗುತ್ತಾನೆ. ನಾನು ಕರೆದ ಹಾಲನ್ನು ತೆಗೆದುಕೊಳ್ಳುತ್ತೇನೆ ಇದು ಬೇಡ ಎಂಬುದಾಗಿ

ಹೇಳುತ್ತಾನೆ. ಇದು ಅವರಲ್ಲಿ ಆಶ್ಚರ್ಯಕರ ಸುದ್ಧಿಯಾಗಿರುತ್ತದೆ. ಎಲ್ಲರ ಮನಸ್ಸು ಶಂಭುವಿನ ಮೇಲೆ ಇರುತ್ತದೆ. ಸಮಾಜದಲ್ಲಿ ಎಲ್ಲಾ ಕೆಲಸದವರಿಗೂ ಒಂದೇ ರೀತಿಯ ಬೆಲೆ ಕೊಡುವುದಲ್ಲಿ ಅವನನ್ನು ನೋಡುವ ದೃಷ್ಟಿಕೋನವೇ ವಿಭಿನ್ನವಾಗಿರುತ್ತದೆ. ಅನೇಕ ರೀತಿಯ ಅಪವಾದಗಳನ್ನು ಹೊರಿಸುತ್ತಾರೆ ನಮ್ಮ ಮಕ್ಕಳನ್ನು ಕರೆದು ಚಾಕಲೇಟ್ ಕೊಡಲು ಬಂದನಂತೆ. ಅವನು ಧರಿಸಿದ ತುಂಡು ಪಂಜೆಯ ಬಗ್ಗೆ ಕಾಮೆಂಟ್ಸ್ ಮಾಡುತ್ತಾರೆ. ಶಂಭು ಮನೆಯ ಪಕ್ಕದ ಸೀತಾ ಭದ್ರನ್ ಗೋಳಂತೂ ಅತಿರೇಕಕ್ಕೆ ಹೋಗಿರುವ ಮಧ್ಯರಾತ್ರಿಯಲ್ಲಿ ಏನೊಂದು ಸಂಗೀತ, ಶಬ್ದ ಹಲವಾರು ರೀತಿಯ ಊಹೆಯನ್ನು ಮಾಡಿ ಹೇಳುತ್ತಾರೆ. ಹೇಗಾದರೂ ಮಾಡಿ ಶಂಭುನನ್ನು ಓಡಿಸಲು ಪ್ರಯತ್ನ ಮಾಡುತ್ತಾರೆ. ಟಿ.ವಿ. ಕೇಬಲ್ ತೆಗೆಯಲು ಹೋದಾಗ ಅವನ ಮನೆಯಲ್ಲಿ ಟಿ.ವಿ.ಯು ಇರುವುದಿಲ್ಲ. ನೀರಿನ ಕನೆಕ್ಷನ್ ತಪ್ಪಿಸಲು ಪ್ರಯತ್ನಿಸುತ್ತಾರೆ. ಅವನು ಕೆಳಗಡೆ ಗಾರ್ಡ್‌ನಿಂದ ನೀರನ್ನು ತಂದು ತನ್ನ ಜೀವನವನ್ನು ಸಾಗಿಸುತ್ತಿರುತ್ತಾನೆ. ಬಾಡಿಗೆ ಬಂದವರು ನೀರಿನ ಸಮಸ್ಯೆ ಇರುವುದನ್ನು ಕಂಡು ವಾಪಸ್ಸು ಹೋಗುತ್ತಾರೆ. ಹೀಗೆ ಅನೇಕ ರೀತಿಯ ಕಿರುಕುಳಗಳು ನಡೆಯುತ್ತವೆ. ಮನುಷ್ಯರಲ್ಲಿ ಹೊಂದಾಣಿಕೆಯಿಲ್ಲದೆ ದ್ವೇಷ ಅಸೂಯೆಗಳಿರುವುದನ್ನು ನೋಡಬಹುದು. ಲಾಯರ್ ರಾಜಣ್ಣನ ಹತ್ತಿರ ಹೋಗಿ ಇವನನ್ನು ಓಡಿಸಲು ಪ್ರಯತ್ನವನ್ನು ಮಾಡುತ್ತಾರೆ. ಆದರೆ ಎಲ್ಲವೂ ಸರಿಯಾಗಿದ್ದರಿಂದ ಈ ಕೆಲಸ ಆಗುವುದಿಲ್ಲ ಎಂಬುದಾಗಿ ತಿಳಿಸುತ್ತಾನೆ. ಒಂದು ದಿನ ಮುಂಜಾನೆ ವಿಚಿತ್ರ ಘಟನೆ ನಡೆಯುತ್ತದೆ. ಶಂಭುವಿನ ಎದುರು ಮನೆಯವರು ಪೇಪರ್ ಹಾಕಲು ಬಾಗಿಲು ತೆಗೆದಾಗ ಶಂಭುವಿನ ಮನೆಯ ಬಾಗಿಲು ಯಾವಾಗಲೂ ಮುಚ್ಚಿರುವುದು ಕಂಡು ಆ ದಿನ ಬಾಗಿಲು ತೆಗೆದಿರುವುದನ್ನು ಕಂಡು ಆಶ್ಚರ್ಯಕರವಾಗುತ್ತದೆ. ಮತ್ತೆ ತಮ್ಮ ಕೆಲಸದಲ್ಲಿ ನಿರತರಾಗುತ್ತಾರೆ. ಮತ್ತೆ ಎಂಟುಗಂಟೆಗೆ ಮನೆಯ ಮುಂದೆ ಹೋದಾಗ ಹಾಸಿದ ಚಾಪೆ ಎಲ್ಲವೂ ನಾಪತ್ತೆಯಾಗಿರುತ್ತದೆ ಮನೆಯಲ್ಲಿ ಊದುಕಡ್ಡಿಯ ವಾಸನೆ, ಜೊತೆಗೆ ರೂಮಿನಲ್ಲಿ ಮುಚ್ಚಿಟ್ಟಿದ್ದ ಹೂವಿನ ಬುಟ್ಟಿಯು ಉಳಿದುಕೊಂಡಿರುತ್ತದೆ. ಎಲ್ಲರೂ ಆಶ್ಚರ್ಯಕರವಾಗುತ್ತಾರೆ. ನಂತರ ಮನೆಯ ಬಾಗಿಲನ್ನು ಹಾಕಲು ಪಕ್ಕದ ಬೀಗವನ್ನು ಹಾಕಿ ಸೆಕ್ಯೂರಿಟಿಗೆ ಬೀಗದ ಕೈಯನ್ನು ಕೊಡುತ್ತಾರೆ.

ಈ ಮೇಲಿನ ಕತೆಯಲ್ಲಿ ಮನುಷ್ಯರ ಜೀವನದಲ್ಲಿ ಹೊಂದಾಣಿಕೆ ಇಲ್ಲದ ಬಾಳನ್ನು ಗುರುತಿಸುತ್ತದೆ. ಕರುಣೆ, ದಯೆ, ಇವು ಯಾವುವು ಅವರಲ್ಲಿ ಕಂಡುಬರುವುದಿಲ್ಲ.

'ಅಂತರ್ಜಾಲ' ಎಂಬ ಕತೆಯಲ್ಲಿ ಮಾನವನು ಪ್ರಾಣವನ್ನು ಕಳೆದುಕೊಂಡಿದ್ದಾನೆ ಎಂಬುದನ್ನು ನೋಡಬಹುದು. ರಂಗಯ್ಯನವರು ತೀರಿಕೊಂಡ ಸುದ್ಧಿ ಎಲ್ಲರಲ್ಲಿಯೂ ಪ್ರಶ್ನಾರ್ಥಕವಾಗಿರುವುದನ್ನು ತಿಳಿಯಬಹುದು. ರಂಗಯ್ಯನವರ ದೇಹವು ಬಿಳಿಬಟ್ಟೆಯಲ್ಲಿ ಸುತ್ತಿದ್ದ ದೇಹದ ಸ್ಥಿತಿಯನ್ನು ನೋಡಿದ್ದರು. ರಂಗಯ್ಯನವರು ಹೀಗೇಕೆ ಮಾಡಿಬಿಟ್ಟರು ಎಂಬುದದಲ್ಲಿ ಗೊಂದಲವುಂಟಾಗುತ್ತದೆ

ಎಪ್ಪತ್ತೈದು ವರ್ಷ ವಯಸ್ಸಿನ ಸಂಚೇನಹಳ್ಳಿ ಕೃಷ್ಣಯ್ಯ ರಂಗಯ್ಯನವರು ನಿವೃತ್ತ ಐಎಎಸ್ ಅಧಿಕಾರಿಯಾಗಿದ್ದರು. ಪ್ರೈಮರಿ ಸ್ಕೂಲಿನ ಮೇಷ್ಟ್ರನ ಮೂರನೇ ಮಗ ರಂಗಯ್ಯ ಬೆಂಗಳೂರಿನ ಪ್ರಖ್ಯಾತ ವೈದ್ಯ ಸುಖತೀರ್ಥರ ಮಗಳು ಸಾವಿತ್ರಮ್ಮನವರನ್ನು ಮದುವೆಯಾಗಿದ್ದರು. ಇವರಿಗೆ ಇಬ್ಬರು ಗಂಡು ಮಕ್ಕಳು. ಕೇಶವ, ಅಚ್ಯುತ ಸಾಫ್ಟ್‌ವೇರ್ ಎಂಜನಿಯರಾಗಿ ಅಮೆರಿಕಾದಲ್ಲಿ ನ್ಯಾನ್ಸಿ ಎಂಬ ಹುಡುಗಿಯನ್ನು ಆಯ್ಕೆಮಾಡಿ ಮದುವೆಯಾಗುತ್ತಾನೆ. ಸಾವಿತ್ರಮ್ಮನವರು ತೀರಿಕೊಂಡಿದ್ದು ಅದು ರಂಗಯ್ಯನವರ ಸಮಸ್ಯೆಯಾಗಿರುತ್ತದೆ. ಕೇಶವ ಅವರ ಹೆಂಡತಿ ಶಾಲಿನಿಯಾಗಿರುತ್ತಾಳೆ. ಇವರ ಒಬ್ಬ ಗಂಡುಮಗು ರಾಜು. ರಂಗಯ್ಯನವರ ಜೀವನವು ಬೇಸರವಾಗುತ್ತದೆ. ಅವನು ಸಮಯವನ್ನು ಕಳೆಯಲು ಕಂಪ್ಯೂಟರನ್ನು ತಂದು ಕೊಟ್ಟಿರುತ್ತಾನೆ. ಅದರ ಮುಖಾಂತರ ಜೀವನವನ್ನು ಸಾಗಿಸುತ್ತಿರುತ್ತಾನೆ. ವಾರಕ್ಕೆ ಎರಡು ದಿನ ಪೋನಿನ ಮುಂಖಾಂತರ ಮಾತುಕತೆಯು ನಡೆಯುತ್ತಿರುತ್ತದೆ. ಆಕಸ್ಮಿಕವಾಗಿ ನಡೆದ ಘಟನೆಯನ್ನು ಅಚ್ಯುತನಿಗೆ ತಿಳಿಸುತ್ತಾರೆ. ಶಾಲಿನಿ ತಮ್ಮಂದಿರಿಂದ ಯಾವುದಾದರೂ ಸಮಸ್ಯೆಯಾಗಿತ್ತಾ ಎಂಬ ಪ್ರಶ್ನೆಗಳು ಉದ್ಭವಿಸುತ್ತಿರುತ್ತವೆ. ತನ್ನ ಮಗಳನ್ನು ತವರ ಮನೆಗೆ ಕಳಿಸಿಕೊಟ್ಟಿರುತ್ತಾರೆ. ರಾತ್ರಿಯಲ್ಲಾ ತುಂಬಾ ಸಮಯ ಇಂಟರ್‌ನೆಟ್‌ನಲ್ಲಿ ಕಳೆಯುತ್ತಿದ್ದ ಎಂಬುದು ಎಲ್ಲರಿಗೂ ತಿಳಿದಿತ್ತು.

ಅಂತರ್ಜಾಲದಿಂದ ಒಳ್ಳೆಯ ಕೆಲಸಗಳು ನಡೆಯುತ್ತವೆ ಅಷ್ಟೇ ಸಮಸ್ಯೆಗಳಿರುತ್ತವೆ. ರಂಗಯ್ಯನವರು ಮರಣದ ವಿಷಯ ಶಾಲಿನಿಗೆ ಮಾತ್ರ ಗೊತ್ತಿರುತ್ತದೆ. ಅಚ್ಯುತ ಮತ್ತು ಅವರ ಹೆಂಡತಿ ನ್ಯಾನ್ಸಿ ಅವರ ಅನನ್ಯತೆಯು ಎಲ್ಲವೂ ಸಮಪಾಲು ಆಗಿರುತ್ತವೆ. ಯಾವುದೇ ರೀತಿಯಲ್ಲಿಯೂ ತಾರತಮ್ಯವಿರುವುದಿಲ್ಲ. ಭಾರತಕ್ಕೂ, ಅಮೆರಿಕಾದವರಿಗೂ ಇರುವ ವ್ಯತ್ಯಾಸವನ್ನು ನೋಡಬಹುದು. ಅವರು ಮರಣದಿಂದ ಸ್ಕೂಲಿನಿಂದ ಬಂದ ರಾಜೂನ ಜೊತೆ ಅಟವಾಡಿ ವಾಕ್ ಸಹ ಹೋಗಿ ಬಂದು ಊಟ ಮಾಡಿ ಮಲಗಿದ್ದಾಗ ವಿಷಯವನ್ನು ಎಲ್ಲರಿಗೂ ತಿಳಿಸುತ್ತಾಳೆ. ಆದರೂ ಸಹ ನಮ್ಮ ಮೇಲೆ ಅಪವಾದವನ್ನು ಹೊರಿಸಿ ತೀರಿಕೊಂಡಿದ್ದಾರೆ ಎಂಬುದಾಗಿ ಗಿಲ್ಟಿಯಾಗಿ ಫುಲ್ ಫೀಲಾಗಿರುತ್ತಾರೆ. ನಂತರ ಕೇಶವ ಆಲ್ಬಮ್ ತಂದು ಎಲ್ಲರೂ ನೋಡುತ್ತಾ ಪೋಟಗಳನ್ನು ಎಲ್ಲಾ ಕೆಲಸ ಕಾರ್ಯಗಳು ಮುಗಿದ ನಂತರ ಅಚ್ಯುತ ಹೊರಡಲು ತಯಾರಾದಾಗ ಮನೆಯಲ್ಲಿದ್ದ ಕೃಷ್ಣನ ಪೋಟೋವನ್ನು ಅವರು ಒಯ್ಯುಲು ಹೋದಾಗ ಅದಕ್ಕೆ ಶಾಲಿನಿ ದಿನಾಲು ಮಾವಂದಿರು ಅದಕ್ಕೆ ಪೂಜೆ ಮಾಡುವರು, ಪೂರ್ವಿಕರಿಂದ ಅದಕ್ಕೆ ಪೂಜೆ ಪುನಸ್ಕಾರಗಳು ನಡೆಯುವವು, ಅದು ಇಲ್ಲೇ ಇರಬೇಕು ಎಂಬ ಮಾತುಕತೆಯು ನಡೆಯುತ್ತವೆ. ಅವರು ಹೋದ ನಂತರ ರಾಜೂನನ್ನು ಕರೆತರುತ್ತಾರೆ. ಶಾಲಿನಿ ಇದಕ್ಕಿದ್ದಂತೆ ಮನಸ್ಸಿಗೆ ಬೇಜಾರಾಗಿ ಅಳತೊಡುಗುತ್ತಾಳೆ ರಂಗಯ್ಯ ನಿಧನ ಹೊಂದಲು ಕಾರಣ ಹನ್ನೊಂದು ಗಂಟೆಯಲ್ಲಿ ಬಾತ್‌ರೂಮಿಗೆ ಹೋಗಲು ಎದ್ದಾಗ ಅಂತರ್ಜಾಲದಲ್ಲಿ

ಬೆತ್ತಲೆಯ ಚಿತ್ರಗಳನ್ನು ಹಾಕಿ ಬಾತ್ ರೂಮಿಗೆ ಹೋದಾಗ ಶಾಲಿನಿಯು ಅದನ್ನು ನೋಡುತ್ತಾಳೆ. ಅವಳು ಕಂಡಿದ್ದರಿಂದ ರಂಗಯ್ಯನವರಿಗೆ ತಡೆಯಲಾಗದಂತಹ ಮುಜುಗರವು ಹೊಂದಿದ್ದರಿಂದ ಪ್ರಾಣವನ್ನು ಕಳೆದುಕೊಂಡಿರುತ್ತಾನೆ. ಈ ವಿಷಯವನ್ನು ಕೇಶವನಿಗೆ ತಿಳಿಸಿದಾಗ ಹೆಚ್ಚಿನ ರೀತಿಯಲ್ಲಿ ಫೀಲಾಗುತ್ತಾನೆ. ಈ ವಿಷಯವು ತಿಳಿಸದಿದ್ದರೆ ಚೆನ್ನಾಗಿರುತ್ತಿತ್ತೇನೋ ಎಂಬುದಾಗಿ ಹೇಳುತ್ತಾನೆ. ಹೀಗೆ ಅಂತರ್ಜಾಲವು ರಂಗಯ್ಯನವರ ಪ್ರಾಣಸಂಕಟಕ್ಕೆ ಕಾರಣವಾಗಿರುವುದನ್ನು ನೋಡಬಹುದು. ಒಂದು ವಸ್ತುವಿನಿಂದ ಎಷ್ಟು ಲಾಭದಾಯಕವಾಗಿರುತ್ತದೆಯೋ ಅಷ್ಟೇ ನಷ್ಟವೂ ಹೊಂದಿರುತ್ತದೆ ಎಂದು ತಿಳಿಯುತ್ತದೆ.

'ಕಸೂತಿಯಮ್ಮ' ಎಂಬ ಕತೆಯಲ್ಲಿ ಕಸೂತಿಯೇ ಮುಖ್ಯ ಕೆಲಸವಾಗಿರುತ್ತದೆ. ಕಲೆಯ ಮೂಲಕ ತನ್ನ ಚೇತನವನ್ನು ಜೀವಂತಗೊಳಿಸಿ ಅದ್ಭುತ ವ್ಯಕ್ತಿಯಾಗಿರುತ್ತಾಳೆ. ಮಹಿಳೆಯು ಯಾವುದೊಂದು ಕೆಲಸವನ್ನು ಮಾಡಿ ತನ್ನ ಜೀವನವನ್ನು ಸಾಗಿಸುವುದನ್ನು ನೋಡಬಹುದು. ಪ್ರೀತಿ–ಪ್ರೇಮವನ್ನು ನೋಡಬಹುದು. ವಯಸ್ಸಾದ ನಂತರವೂ ತನ್ನ ಹಳೆಯ ನೆನಪುಗಳನ್ನು ಈ ಕತೆಯಲ್ಲಿ ಚಿತ್ರಿಸಿದ್ದಾರೆ. ಕಸೂತಿಯಮ್ಮ ಮಧ್ಯವಯಸ್ಸಿನವಳು ಅವಳಿಗೆ ಹೂವುಗಳೆಂದರೆ ಪ್ರಾಣವಾಗಿರುತ್ತದೆ. ಮನೆಯ ಮುಂದೆ ನಾನಾ ರೀತಿಯ ಹೂ ತೋಟವನ್ನು ಮಾಡಿರುತ್ತಾಳೆ. ಪ್ರತಿ ನಿತ್ಯ ಮನೆಯ ವರಾಂಡದಲ್ಲಿ ಕುರ್ಚಿಯ ಮೇಲೆ ಕಸೂತಿಯನ್ನು ಹಾಕುವುದು ಆಕೆಯ ವೃತ್ತಿಯಾಗಿರುತ್ತದೆ. ಕಾಲೇಜು ಮೇಷ್ಟ್ರು ಬೂದುಬಣ್ಣದ ಪ್ಯಾಂಟು, ಬಿಳಿ ಶರಟು ಧರಿಸಿ ಹೋಗುವ ಅವರ ಮೇಲೆ ಪ್ರೇಮವು ಪ್ರಾರಂಭವಾಗುತ್ತದೆ. ಇಬ್ಬರಲ್ಲಿಯೂ ಆರಂಭವಾದ ಪ್ರೇಮ ಜೀವನ ಪರ್ಯಂತ ಹಾಗೆ ಉಳಿದಿರುತ್ತದೆ. ಕಸೂತಿಯಮ್ಮನ ಮದುವೆ ಲಾಯರ್‌ನ ಮಗನೊಂದಿಗೆ ನಿಶ್ಚಯವಾಗುತ್ತದೆ. ನಿಶ್ಚವಾದ ದಿನದಿಂದ ಅವರ ಸುತ್ತಾಟ ಮದುವೆಯ ಮೊದಲೇ ಅವರ ಹೊಂದಿದ ಸಂಬಂಧ ಇವುಗಳನ್ನು ನೋಡಬಹುದು. ಇವುಲ್ಲೆವೂ ಎಲ್ಲಾ ಕತೆಗಳಲ್ಲಿ ಕಾಣಲು ಸಾಧ್ಯವಿಲ್ಲ. ನಗರೀಕರಣದ ಜೀವನದಲ್ಲಿ ಮಾತ್ರ ಕಂಡುಬರುತ್ತದೆ. ಅಲ್ಲಿ ಮಹಿಳೆಗೆ ಯಾವುದೇ ಕಟ್ಟುನಿಟ್ಟಿಲೆಗಳು ಸ್ವಲ್ಪಮಟ್ಟಿಗೆ ಕಡಿಮೆ ಕಂಡುಬರುತ್ತದೆ. ತಾನು ಉದ್ಯೋಗಸ್ಥಳಾಗಿ, ಸ್ವತಂತ್ರ್ಯವಾಗಿ ತನ್ನ ಜೀವನ ರೂಪಿಸಿಕೊಳ್ಳುವುದನ್ನು ನೋಡಬಹುದು. ಕಸೂತಿಯಮ್ಮ ಬಣ್ಣ ಬಣ್ಣದ ಹೂವುಗಳನ್ನು ಹಾಕುವುದು, ಆಕೆಯ ಹವ್ಯಾಸವಾಗಿರುತ್ತದೆ. ಆದರೆ ಜೀವನವು ಆಸಕ್ತಿದಾಯಕವಾಗಿರುವುದಿಲ್ಲ. ತನ್ನ ಗಂಡನಿಂದ ಯಾವುದೇ ರೀತಿಯಲ್ಲಿಯೂ ನೆಮ್ಮದಿ, ಶಾಂತಿಯನ್ನು ಪಡೆದಿರುವುದಿಲ್ಲ. ಅವಳ ಕಸೂತಿಯಲ್ಲಿಯೇ ಎಲ್ಲಾ ರೀತಿಯ ಸುಖ–ಸಂತೋಷಗಳನ್ನು ಪಡೆಯುತ್ತಿದ್ದಳು.

ಕಸೂತಿಯಮ್ಮನವರಿಗೆ ಸಮಾಜದಲ್ಲಿ ನಡೆಯುತ್ತಿರುವ ಅನೇಕ ರೀತಿಯ ಗೊಂದಲುಗಳು ಯಾವುದರ ಅರಿವಿಲ್ಲದೇ ತನ್ನ ಕೆಲಸದಲ್ಲಿ ನಿರಂತರಾಗಿರುವುದೇ ಕಸೂತಿಯಮ್ಮನವರ ಧ್ಯೇಯವಾಗಿತ್ತು

ಬಸುರಿಯಲ್ಲಿ ಆಸ್ಪತ್ರೆಯಲ್ಲಿದ್ದಾಗ ಗಂಡ ಆಸ್ಪತ್ರೆಗೆ ಬರುವ ಹೊತ್ತಿಗೆ ತನ್ನ ಮಗ ತೀರಿಕೊಂಡಿರುತ್ತಾನೆ. ನಾವು ಮಾಡುವ ಕೆಲಸವು ನಮ್ಮ ವ್ಯಕ್ತಿತ್ವವನ್ನು ನಿರ್ಧರಿಸುವುದು ಅದರ ಧ್ಯೇಯವಾಗಿರುತ್ತದೆ. ತನ್ನ ಜೀವನದಲ್ಲಿ ಎಲ್ಲವನ್ನು ಕಳೆದುಕೊಂಡ ಕಸೂತಿಯೊಂದೇ ಉಳಿದಿರುತ್ತದೆ. ತಾನು ಎಷ್ಟೇ ಕಷ್ಟಗಳನ್ನು ಎದುರಿಸಬೇಕಾದರೂ ತನ್ನ ವೃತ್ತಿಯನ್ನು ಬಿಡುವುದಿಲ್ಲ. ತನ್ನ ಪ್ರಾಣವನ್ನು ಕಸೂತಿ ಹಾಕುವುದರಲ್ಲಿ ಕಳೆದುಕೊಳ್ಳುತ್ತಾಳೆ. ಆಕೆಯು ಹಾಕಿದ ಕಸೂತಿಯು ಸರ್ಕಾರಕ್ಕೆ ಆಧೀನವಾಗಿರುವುದನ್ನು ಕಸೂತಿಯಲ್ಲಿಯೇ ಹೆಚ್ಚಿನ ರೀತಿಯಲ್ಲಿ ಹೆಸರುಗಳಿಸುತ್ತಾಳೆ. ತಾನು ನಿಧನ ಹೊಂದಿದ್ದರೂ ತಾನು ಮಾಡಿದ ಕೆಲಸ ಶಾಶ್ವತವಾಗಿ ಉಳಿದಿರುವುದನ್ನು ನೋಡಬಹುದು. ಮನುಷ್ಯನ ತನ್ನ ಜೀವನವನ್ನು ಸಾಗಿಸಲು ಯಾವುದೋ ಒಂದು ಕೆಲಸದಲ್ಲಿ ನಿರತಳಾಗುತ್ತಾಳೆ ಆ ಕೆಲಸ ಉನ್ನತ ರೀತಿಯಲ್ಲಿ ಮಾಡುವುದರಿಂದ ಅದರ ಮಹತ್ವ ಉತ್ತಮವಾಗಿರುತ್ತದೆ. ಕಸೂತಿಯಮ್ಮನಲ್ಲಿ ಬೇಜವಾಬ್ದಾರಿಯೂ ಕಂಡುಬರುವುದಿಲ್ಲ ಆದ್ದರಿಂದಲೇ ಆಕೆಯು ಪ್ರಸಿದ್ಧಿಯನ್ನು ಪಡೆದಿರುತ್ತಾಳೆ.

ಮನುಷ್ಯನ ಜೀವನದಲ್ಲಿ ಸೋಮಾರಿತನ ಸಲ್ಲದು. ಅವನು ಯಾವುದೇ ಒಂದು ವೃತ್ತಿಯಲ್ಲಿ ನಿರತರಾಗಿರುವುದೇ ಮುಖ್ಯ ಎಂಬುದು ತಿಳಿಸುತ್ತದೆ. ಕಸೂತಿಯಮ್ಮನವರು ತನ್ನ ಜೀವನದ ಕೊನೆಯ ಗಳಿಗೆಯಲ್ಲಿ ಕಸೂತಿಯನ್ನು ಹಾಕುತ್ತಿರಬೇಕಾದರೆ ಬೂದುಬಣ್ಣದ ಪ್ಯಾಂಟು ಬಿಳಿ ಶರಟು ಧರಿಸಿ ಬಿಳಿಕೂದಲು, ಕನ್ನಡಕವೂ ಬಂದಿರುತ್ತದೆ. ಕೈಯಲ್ಲಿ ಪುಸ್ತಕವಿರುತ್ತದೆ. ಆಕೆಯು ನೆನಪಿಗೆ ಬರುತ್ತಾಳೆ. ಆದರೆ ಮೆಷ್ಟ್ರು ಮನಸ್ಸಿನಲ್ಲಿ ಹಿಂದಿನ ದಿನಗಳಲ್ಲಿ ನಡೆಯುತ್ತಿದ್ದ ತಳಮಳವು ಕಂಡುಬರುವುದಿಲ್ಲ. ಮನುಷ್ಯನ ಜೀವನದಲ್ಲಿ ನೆನಪುಗಳು ಸಾಯುವವರಿಗೂ ಕಾಡುತ್ತಿರುತ್ತವೆ. ತನ್ನ ವೃತ್ತಿಯಿಂದಲೇ ಕಸೂತಿಯಮ್ಮ ಎಂದು ಹೆಸರು ಗಳಿಸಿರುತ್ತಾಳೆ. ಮಹಿಳೆಯೂ ಈಗಿನ ಸಮಾಜದಲ್ಲಿ ಯಾವುದರಲ್ಲಿಯೂ ಕಡಿಮೆಯಿಲ್ಲ ತಾನು ದುಡಿಯುವವಳಾಗಿದ್ದಾಳೆ ಎಂಬುದನ್ನು ತಿಳಿಯಬಹುದು.

'ಬೆತ್ತಲೆ' ಎಂಬ ಕತೆಯಲ್ಲಿ ಬಡತನದಲ್ಲಿ ಬೆಳೆದ ದಿಲೀಪನ ಬದುಕನ್ನು ಒಳಗೊಂಡಿದೆ. ಶ್ರೀಮಂತ ವರ್ಗದವರು ಕೆಲಸದವರನ್ನು ನೋಡುವ ಸ್ಥಿತಿ ಇಲ್ಲಿದೆ. ಕೆಲಸಕ್ಕೆಂದು ಸೇರಿಸಿಕೊಂಡ ಸೇಟ್, ದಿಲೀಪನನ್ನು ಮಾತಿನಲ್ಲಿ ಮರಳು ಮಾಡಿರುತ್ತಾನೆ, ಸೇಲ್ಸ್‌ಮನ್ ಅಂತ ತಿಳಿದು ಕೆಲಸಕ್ಕೆ ಹೋದಾಗ ಬೆತ್ತಲೆಯಾಗಿದ್ದ ಬೊಂಬೆಗಳನ್ನು ಅಲಂಕರಿಸುವುದು ಅವನ ಕೆಲಸವಾಗಿರುತ್ತದೆ. ಅವನು ತುಂಬಾ ಪ್ರಾಮಾಣಿಕವಾಗಿ ಕೆಲಸ ಮಾಡಿದ್ದರೂ ಸೇಟ್ ನೋಡುವ ರೀತಿಯೇ ಬೇರೆಯಾಗಿರುತ್ತದೆ. ಆ ಬೆತ್ತಲೆ ಬೊಂಬೆಗಳು ಒಂದು ಕಪ್ಪಾದರೆ, ಇನ್ನೊಂದು ಗುಲಾಬಿ ಬಣ್ಣದು, ಒಂದು ಬೊಂಬೆ ಸೊಂಟದವರೆಗೆ ಮಾತ್ರ ಇರುತ್ತದೆ. ಇದನ್ನು ಕಂಡ ದೀಲಿಪನ ಮೊದಲ ಅನುಭವ ವಿಚಿತ್ರವಾಗಿರುತ್ತದೆ. ಅವನ ಸಹಾಯಕ್ಕೆ ಬಂದವಳು ಕೆಲಸದ ರುಕ್ಕುಬಾಯಿಯಾಗಿರುತ್ತಾಳೆ. ಸೇಲ್ಸ್‌ನಲ್ಲಿ ಹೆಚ್ಚು ರೀತಿಯ ಕೆಲಸವನ್ನು ಹೊಂದಿರುತ್ತದೆ. ಬಟ್ಟೆಗಳು ಜೋಡಿಸುವದು, ಮಡಚುವುದು ಹೀಗೆ ಅನೇಕ ರೀತಿಯ

ಕೆಲಸವಿರುತ್ತದೆ. ಆದರೆ ಕೆಲಸದ ಕಷ್ಟ ಅವರ ತಾಯಿಗೂ ತಿಳಿದಿರುವುದಿಲ್ಲ. ಬಡತನವನ್ನು ಹೊಂದಿರುವುದರಿಂದ ಜೀವನವನ್ನು ಸಾಗಿಸುವುದು ತುಂಬಾ ಕಷ್ಟಕರವಾಗಿರುತ್ತದೆ. ಆ ಸಮಸ್ಯೆಯನ್ನು ಬಗೆಹರಿಸಲು ದುಡಿಯಲು ಕಳಿಸಿರುತ್ತಾಳೆ. ದಿಲೀಪ್ ಕೆಲಸ ಮಾಡುವುದರಲ್ಲಿ ಪರಿಣಿತಿಯನ್ನು ಹೊಂದಿರುತ್ತಾನೆ. ಆ ಬೆತ್ತಲೆ ಬೊಂಬೆಗಳನ್ನು ಅಲಂಕರಿಸುವುದರಲ್ಲಿ ತುಂಬಾ ಆನಂದವನ್ನು ಪಡೆದಿರುತ್ತಾನೆ. ಕಪ್ಪಗಿರುವಳು ಕಾಜೋಲ್, ಗುಲಾಬಿ ಬಣ್ಣದವರು ಮಾಧುರಿ, ಮೇಲ್ಲೆ ಮಾತ್ರ ಇದನ್ನು ಹೆಲೆಸ್ ಈ ರೀತಿಯ ಹೊಸ ಹೆಸರುಗಳಿಂದ ಅಲಂಕರಿಸಲು ಮುಂದಾಗುತ್ತಾನೆ ದಿಲೀಪ್‌ಗೆ ಕೊಬೋತ ಕಂಡರೆ ಹೆಚ್ಚು ಮೆಚ್ಚುಗೆಯನ್ನು ಹೊಂದಿರುತ್ತಾನೆ ಹೊಸ ಹೊಸ ಮಾದರಿಯ ಬಟ್ಟೆಗಳು ಬಂದಾಗ ಬೊಂಬೆಗಳಿಗೆ ಅಲಂಕರಿಸುವುದೇ ಅವನ ಕರ್ತವ್ಯವಾಗಿರುತ್ತದೆ. ಆ ಗೋಡನ್‌ಗಳಲ್ಲಿ ಬಹಳ ತೊಂದರೆ ಇರುತ್ತದೆ. ಕೆಲಸವನ್ನು ಮಾಡಲು ಸೇಲ್ಸ್‌ಮೆನ್‌ರವರು ಬಂದಾಗ ಒಂದು ರೀತಿಯ ಪರಿಸರವಿದ್ದರೆ ಕೆಲಸವನ್ನು ಮಾಡಲು ನಿರಂತರ ಇರುವವರು ಬಂದು ರೀತಿಯ ಪರಿಸರವಿರುತ್ತವೆ. ಸೇಲ್ಸಮೆನ್ ಇವನನ್ನು ಕಂಡರೆ ಯಾವುದೇ ಒಂದು ರೀತಿಯಲ್ಲಿ ಕಿರುಕುಳವನ್ನು ನೀಡುತ್ತಿರುತ್ತಾನೆ. ಸೇಲ್ಸ್‌ಮೆನ್ ಆಡಳಿತಕ್ಕೆ ಒಳಗಾಗಿರುವುದು ಕಂಡುಬರುತ್ತದೆ.

ಆಯಿ ಒಳ್ಳೆಯ ಕೆಲಸದಲ್ಲಿದ್ದಾನೆಂದು ಭಾವಿಸಿ ಖುಷಿಯನ್ನು ಹೊಂದಿರುತ್ತಾಳೆ. ಅಲ್ಲಿನ ಕೆಲಸದ ಹುಡುಗಿಯರು ದಿಲೀಪನನ್ನು ತುಂಬಾ ಮೆಚ್ಚುಗೆಯಿಂದ ಕಾಣುತ್ತಿರುತ್ತಾರೆ ಅವರ ಎಲ್ಲಾ ಸಮಸ್ಯೆಗಳನ್ನು ದಿಲೀಪಗೆ ಹೇಳುತ್ತಿರುತ್ತಾರೆ. ಸೇಟ್ ಮಾತ್ರ ಅವನಿಗೆ ಕಿರುಕುಳವನ್ನು ಕೊಡುತ್ತಿರುತ್ತಾನೆ.

ದಿಲೀಪಗೆ ತಿಂಗಳಿಗೆ ಎಂಟುನೂರು ರೂಪಾಯಿಯನ್ನು ಕೊಡಲು ನಿಶ್ಚಯಿಸಿರುತ್ತಾರೆ. ದಿನ ಕಳೆದಂತೆ ಅಲ್ಲಿ ಕೆಲಸದವರ ಪರಿಚಯ ಉಂಟಾಗಿ ಮಾತುಕತೆಯನ್ನು ಬೆಳೆಸುತ್ತಾನೆ. ದೀಪಾವಳಿ ಹಬ್ಬ ಹತ್ತಿರವಾದಂತೆ ಕೆಲಸವು ಹೆಚ್ಚಾಗುತ್ತವೆ. ಅವನ ಆಯಿ ಅಂಗಡಿಗೆ ಬರಲು ಮುಂದಾಗುತ್ತಾಳೆ. ಲಕ್ಷ್ಮೀಬಾಯಿ ಇಬ್ಬರು ಇದಕ್ಕಿದಂತೆ ಅಂಗಡಿಗೆ ಬರುತ್ತಾರೆ. ಇವನು ಅವರಿಗೆ ಯಾವ ರೀತಿಯಲ್ಲಿಯೂ ಸಮಧಾನವನ್ನು ವ್ಯಕ್ತಪಡಿಸುವ ಪರಿಸ್ಥಿತಿಯಲ್ಲಿರುವುದಿಲ್ಲ. ಪಕ್ಕದ ಅಂಗಡಿಗೆ ಹೋಗಿ ಚಹಾ ಕುಡಿಯಲು ಮುಂದಾಗುತ್ತಾರೆ. ಸೇಲ್ಸ್‌ಮೇನ್ ಇದನ್ನು ಕಂಡು ಅವನನ್ನು ಬಯ್ಯುಲು ಮುಂದಾಗುತ್ತಾನೆ. ಅವರು ಹೋದ ತಕ್ಷಣ ತನ್ನ ಕೆಲಸವನ್ನು ಆರಂಭಿಸುತ್ತಾನೆ. ಎಲ್ಲರ ಕೆಲಸದಲ್ಲಿಯೂ ಬೋನಸ್ ಕೊಡುತ್ತಾರೆ. ಆದರೆ ದಿಲೀಪಗೆ ಕೊಡುವುದಿಲ್ಲ. ಅವರ ಹೋದ ತಕ್ಷಣ ಕೆಲಸದಲ್ಲಿ ನಿರತಾಗಿರುತ್ತಾನೆ ಬೆತ್ತಲೆ ಬೊಂಬೆಗಳಿಗೆ ಅಲಂಕಾರವನ್ನು ಮುಂದುವರಿಸಲು ಹೋದಾಗ ಅವನು ಕೆಲಸದಲ್ಲಿ ಏರು-ಪೇರು ಮಾಡುತ್ತಾನೆ. ಆದ್ದರಿಂದ ಸೇಟ್‌ಮೇನ್ ಕೆಲಸದಿಂದ ತೆಗೆಸುತ್ತಾನೆ. ದಿಲೀಪ್ ಮನೆಯನ್ನು ಸೇರದೇ ನಂತರ ಎಲ್ಲೋ ಹೊರಡುತ್ತಾನೆ. ಶ್ರೀಮಂತರು ಕೆಲಸದವರ ಮೇಲೆ ದಯೆ, ಕರಣೆ ಯಾವುದೇ ರೀತಿಯ ಭಾವನೆಗಳು ಕಂಡುಬರುವುದಿಲ್ಲ. ಸೇಲ್ಸ್‌ಮೆನ್ ದಿಲೀಪ್‌ಗೆ ಮಾಡುವ ಅನ್ಯಾಯವನ್ನು ನೋಡಬಹುದು.

'ಪಯಣಿಗರ' ಕತೆಯಲ್ಲಿ ಭಾರತೀಯ ಸಂಸ್ಕೃತಿಯನ್ನು ಮೀರಿ ನಡೆಯುತ್ತಿರುವ ಅಮೆರಿಕಾ ಸಂಸ್ಕೃತಿಯನ್ನು ಚಿತ್ರಿಸಿಲಾಗಿದೆ. ಈ ಕತೆಯ ಮುಖ್ಯ ಪಾತ್ರ ರಷಾಳಾಗಿರುತ್ತಾಳೆ. ಅಪರಿಚತರೊಡನೆ ಆಕಸ್ಮಿಕವಾಗಿ ನಡೆಯುವ ಘಟನೆಯೊಂದಿಗೆ ಮದುವೆಯ ಮೊದಲೇ ದಾಂಪತ್ಯವನ್ನು ಆರಂಭಿಸುವ ಸಂಭಾಷಣೆಯು ಈ ಕತೆ ಒಳಗೊಂಡಿದೆ. ಈ ಘಟನೆಯೂ ಎಲ್ಲರಲ್ಲೂ ಸಹಜವಾಗಿ ನಡೆಯಲು ಸಾಧ್ಯವಿಲ್ಲ. ಅಕ್ಷರಸ್ಥ ಜೀವನವು ಮುಂದುವರೆದ ದೇಶಗಳ ಪ್ರಭಾವವಿದ್ದರೆ ಮಾತ್ರ ಹೀಗೆ ನೆಡೆಯಲು ಸಾಧ್ಯವಾಗಿರುತ್ತದೆ. ರಷಾ ಎನ್ನುವಳು ಭಾರತದಿಂದ ಹೋಗಿ ಅಮೆರಿಕಾದಲ್ಲಿ ನೆಲೆಸಿರುತ್ತಾಳೆ. ಅಲ್ಲಿ ಒಬ್ಬರನ್ನು ಪ್ರೀತಿಸಿ ಮದುವೆಯ ಮುಂಚೆಯೇ ಒಂದು ವರ್ಷ ಕೂಡಿ ಬಾಳಲು ನಿರ್ಣಯಿಸುತ್ತಾರೆ. ಅದು ತಂದೆ-ತಾಯಿಗೆ ಒಪ್ಪಿಗೆಯ ವಿಷಯವಾಗಿರುವುದಿಲ್ಲ ಅದನ್ನು ಒಪ್ಪಿಸಲು ತಾಯಿ ಭಾರತದಿಂದ ಅಮೆರಿಕಾಗೆ ಹೋಗಲು ಪ್ರಯಾಣವನ್ನು ಆರಂಭಿಸಿರುತ್ತಾಳೆ. ರಷಾ ಮತ್ತು ತಂದೆ ತಾಯಿಯರ ನಡುವೆ ಅನೇಕ ರೀತಿಯ ವಾಗ್ವಾದಗಳು ನಡೆಯುತ್ತವೆ. ನಮ್ಮ ಸಂಸ್ಕೃತಿಯೂ ಆಗಲ್ಲ ಎಂದು ಹೇಳಿದರೂ ಸಹ ರಷಾ ಪ್ರೀತಿ ಎನ್ನುವುದು ಭಾರತದಲ್ಲಿ ಒಂದು ರೀತಿ, ಅಮೆರಿಕಾದಲ್ಲಿ ಒಂದು ರೀತಿ ಇರುವುದಿಲ್ಲ. ನಾವು ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಬೇಕಾದರೆ ಈ ರೀತಿಯ ಜೀವನ ಅಗತ್ಯ ಎಂಬುದು ರಷಾಳ ವಾದವಾಗಿರುತ್ತದೆ. ಈ ಕತೆಯಲ್ಲಿ ರಷಾಳ ಸ್ವಾರ್ಥತೆಯನ್ನು ಕಾಣಬಹುದು ಬೇರೊಂದು ದೇಶಗಳಲ್ಲಿ ಅಮ್ಮ, ಅಕ್ಕ, ತಂಗಿ ಈ ರೀತಿಯ ಸಂಬಂಧಗಳಿಗೆ ಅಸ್ಪಾದ ಕಡಿಮೆಯಿರುತ್ತದೆ. ತಮ್ಮ ಸುಖ ಸಂತೋಷಗಳಿಗೆ ಹೆಚ್ಚಿನ ರೀತಿಯ ಆದ್ಯತೆಯು ಕೊಡುತ್ತಾರೆ ಬೇರೊಬ್ಬರ ಇಚ್ಛೆಗೆ ತಕ್ಕಂತೆ ಜೀವನ ನಡೆಸುವುದು ಕಷ್ಟಕರ ಸಂಗತಿಯಾಗಿರುವುದನ್ನು ನೋಡಬಹುದು. ಸಮಾಜಕ್ಕೆ ಈ ವಿಷಯ ವಿರುದ್ಧವಾಗಿದೆಯೆಂದು ಹೇಳಿದರೆ ನಾನು ಸಮಾಜವನ್ನು ಒಪ್ಪಿಸಿ ಜೀವನ ಮಾಡಲು ಸಾಧ್ಯವಿರುವುದಿಲ್ಲ ಎಂದು ರಷಾಳು ಹೇಳುತ್ತಾಳೆ. ಯಾವುದೇ ರೀತಿಯಲ್ಲಿಯೂ ಒಪ್ಪಿಗೆಯ ಪ್ರಸಂಗವೂ ಕಂಡುಬರುವುದಿಲ್ಲ.

'ಮೂವತ್ತಾರು ಇಪ್ಪತ್ನಾಲ್ಕು ಮೂವತ್ತಾರು' ಈ ಕತೆಯಲ್ಲಿ ವಯಸ್ಸಿನ ಅಂತರವನ್ನು ಸೂಚಿಸುತ್ತದೆ. ಈಗಿನ ಪ್ರಪಂಚ ಬೆಳವಣಿಗೆಯು ಯಾವ ರೀತಿಯಲ್ಲಿ ಮುಂದುವರೆದಿದೆ ಎಂಬುದನ್ನು ನೋಡಬಹುದು. ಈ ಕತೆಯಲ್ಲಿ ಮಾಲಿನಿ ಮತ್ತು ನಿರ್ಮಲಾ ಕೆಲವೊಂದು ಘಟನೆಗಳನ್ನು ಕುರಿತು ಚರ್ಚಿಸಲಾಗಿದೆ. ಮಾಲಿನಿ ಭರತನಾಟ್ಯದಲ್ಲಿ ಪರಿಣಿತಿಯನ್ನು ಹೊಂದಿದವಳು ಆಗಿರುತ್ತಾಳೆ. ಅವಳು ಯಾರ ಸಹವಾಸಕ್ಕೆ ಹೋಗದೇ ತಾನು ಆಯಿತು ತನ್ನ ಕೆಲಸ ಆಯಿತು ಇದರಮಿತಿಯಲ್ಲಿಯೇ ಜೀವನವನ್ನು ಆರಂಭಿಸುತ್ತಿರುತ್ತಾಳೆ. ಕೆಮಿಕಲ್ ಕಾಲೋನಿಯಲ್ಲಿ ಮಾಲಿನಿಯನ್ನು ಕಂಡರೆ ಎಲ್ಲರಲ್ಲಿಯೂ ಅಸೂಯೆ ಇರುತ್ತದೆ. ಏಕಾಂಗಿಯಾಗಿರುವುದರಿಂದ ಯಾರಿಗೂ ಇವಳನ್ನು ಕಂಡರೆ ಆಗುತ್ತಿರುವುದಿಲ್ಲ. ಇದ್ದಕ್ಕಿದ್ದಂತೆ ಮಾಲಿನಿಯವರ ಮನೆಗೆ ನಿರ್ಮಾಲಾ ಭೇಟಿ ಕೊಡುತ್ತಾಳೆ. ಕೆಲವೊಂದು ಮಾತುಕತೆ

ಆದ ನಂತರ ತನ್ನ ಭೇಟಿಯ ಬಗ್ಗೆ ಚರ್ಚೆಯನ್ನು ಮಾಡುತ್ತಾ, ನನ್ನ ಪರ್ಸನಲ್ ವಿಷಯದ ಮಾತುಕತೆ ಯಾರಿಗೂ ತಿಳಿಸಬಾರದು ಮತ್ತು ನನ್ನ ಮೈಕಟ್ಟನ್ನು ಬೆಳಸಬೇಕು, ಅದು ಬೆಳಯಲು ಭರತನಾಟ್ಯ ಕಲಿಯಲು ಬಂದಿದ್ದೇನೆ. ಈ ವಿಷಯ ಯಾರಿಗೂ ತಿಳಿಸಬೇಡ ಎಂಬುದಾಗಿ ಹೇಳುತ್ತಾಳೆ. ನಂತರ ನಾನು ಡಾಕ್ಟರ ಬಳಿ ಹೋಗಲು ನಿರ್ಣಯಿಸಿದ್ದೇನೆ. ಈ ವಿಷಯ ನನ್ನ ಗಂಡನಿಗೂ ಗೊತ್ತು, ಆದರೂ ಎಲ್ಲವೂ ತಿಳಿಸಿಲ್ಲ. ಡಾಕ್ಟರ್ ಎಲ್ಲಾ ರೀತಿಯ ಸೂಚನೆಗಳನ್ನು ನೀಡಿದ್ದಾರೆ ಅದಕ್ಕೆ ನಾನು ಒಪ್ಪಿಗೆಯನ್ನು ನೀಡಿದ್ದೇನೆ. ಅದರ ಸಲವಾಗಿ ಹೆಚ್ಚಿನ ಹಣವು ಸಹ ಖರ್ಚ ಮಾಡಲು ಸಿದ್ಧಳಿದ್ದೇನೆ. ಬದುಕು ಎನ್ನುವುದು ಅಮೂಲ್ಯವಾದದ್ದು, ಅದನ್ನು ಸರಿಯಾದ ರೀತಿಯಲ್ಲಿ ಅದನ್ನು ಉಪಯೋಗಿಸಬೇಕು ಎಂಬ ಮಾತು ತಿಳಿಸುತ್ತಾಳೆ. ಗಂಡ–ಮಗ ಮನೆಗೆ ತಲುಪುದರಲ್ಲಿ ಎಲ್ಲಾ ರೀತಿಯ ವ್ಯವಸ್ಥೆಯನ್ನು ಪಡೆದು ಡಾಕ್ಟರು ಬರೆದಕೊಟ್ಟ ಭೇಟಿಯನ್ನು ಬಾಕ್ಸ್‌ನಲ್ಲಿ ಹಾಕಿರುತ್ತಾಳೆ. ನಿರ್ಮಲಾ ಭರತನಾಟ್ಯ ಕ್ಲಾಸಿಗೆ ಹೋದಾಗ ಕಳ್ಳತನವಾಗಿರುತ್ತದೆ ಮನೆಯಲ್ಲಿ ಪೋಲಿಸರ ಕೈಯಲ್ಲಿ ಎಲ್ಲಾ ಸಾಮಾನು ಸೇರಿರುತ್ತದೆ. ಸ್ಟೇಷನಗೆ ಹೋದಾಗ ಆ ಸಾಮಾನನ್ನು ಕಂಡು ನಿರ್ಮಲಾ ಕಂಗಾಲು ಆಗುತ್ತಾಳೆ. ಹೀಗೆ ಮುಂದುವರಿದ ಪ್ರಪಂಚವೂ ಅನೇಕ ರೀತಿಯ ವ್ಯವಸ್ಥೆಯನ್ನು ಹೊಂದಿದೆ. ಕೇವಲ ಹಣವಿದ್ದರೆ ಯಾವುದನ್ನು ಆದರೂ ಮಾಡಲು ಸಾಧ್ಯ ಎಂಬುದು ಅರಿವಾಗುತ್ತದೆ.

ಮನುಷ್ಯನ ಎಲ್ಲಾ ವ್ಯವಸ್ಥೆಯ ಬದಲಾವಣೆಯನ್ನು ಹೊಂದುವ ಕಾಲ ಬಂದಿರುವುದನ್ನು ನೋಡಬಹುದಾಗಿದೆ. ಈ ಕೆಲಸ ಕಾರ್ಯಗಳು ನಡೆಯಲು ಈಗಿನ ತಾಂತ್ರಿಕತೆ ವಿಜ್ಞಾನವೇ ಪ್ರಮುಖ ಕಾರಣವಾಗಿರುವುದನ್ನು ಕಾಣಬಹುದು.

'ಗ್ರೌಂಡ್ ಜೀರೋ' ಕತೆಯಲ್ಲಿ ಅಮೆರಿಕಾದಲ್ಲಿ ಮಿಸ್ಸಿಂಗ್ ಆದ ಕತೆಯನ್ನು ಒಳಗೊಂಡಿದೆ. ಅಲ್ಲಿನ ಜೀವನ ಶೈಲಿಯನ್ನು ಚಿತ್ರಿಸಿದ್ದಾರೆ. ನಳಿನಿಯ ಗಂಡ ಶೇಖರ್ ಕೆಮಿಕಲ್ ಇಂಜನಿಯರಾಗಿರುತ್ತಾರೆ. ಅಮೆರಿಕಾದಲ್ಲಿ ಅವರ ಮಗ ಶಶಿಧರ, ನೀರಬಾ ಗಂಡ ಜನಾರ್ದನ ಇವರ ಮಗ ಪ್ರದ್ಯೂಮ್ನ ನಳಿನ ಮತ್ತು ನೀರಬಾ ಅವರು ಅಕ್ಕತಂಗಿಯರಾಗಿರುತ್ತಾರೆ. ನೀರಬಾ ಅವರ ಜೀವನವನ್ನು ಸಾಗಿಸುವುದು ಕಷ್ಟದಾಯಕವಾಗಿರುತ್ತದೆ. ಮಗ ಇಂಜನಿಯರಿಂಗನಲ್ಲಿ ಉನ್ನತ ಮಟ್ಟದಲ್ಲಿ ಪಾಸಾಗಿರುತ್ತಾನೆ. ವಿದೇಶಕ್ಕೆ ಆಯ್ಕೆ ಆಗಿರುತ್ತಾನೆ. ನಳಿನಿಯವರು ಅಲ್ಲೇ ನೆಲೆಸಿರುವುದರಿಂದ ಏನೋ ಸಮಸ್ಯೆಯಲ್ಲಿ ಅವನನ್ನು ಕರೆದೊಯ್ಯೊಲು ಪ್ರಯತ್ನಿಸುತ್ತಾರೆ. ಪ್ರದ್ನಮ್ಯ ಅಮೆರಿಕಾಗೆ ಹೋಗಿ ಅಲ್ಲಿನ ಜೀವನವನ್ನು ಆರಂಭಿಸುತ್ತಾನೆ. ನಳಿನಿ ಮಗ ಶಶಿಧರ ಅಲ್ಲಿಯೇ ಕೆಲ್ಲಿ ಎನ್ನುವಳ ಜೊತೆ ಪ್ರೀತಿ ಆರಂಭವಾಗಿ ಒಟ್ಟಿಗೆ ಮದುವೆಯ ಮುಂಚೆಯೇ ಒಂದು ವರ್ಷ ಕೂಡಿ ಬಾಳಲು ಆರಂಭಿಸುತ್ತಾರೆ. ಇದು ನಮ್ಮ ಸಂಸ್ಕೃತಿಗೆ ವಿರುದ್ಧವಾಗಿರುತ್ತದೆ. ಆದರೂ ಮಗನು ತನ್ನ ಮಾತನ್ನು ಕೇಳುವ ಪರಿಸ್ಥಿತಿಯಲ್ಲಿಯೂ

ಇರುವುದಿಲ್ಲ ಹೆಚ್ಚಿನ ಸಲ ಪ್ರದ್ಯೂಮ್ನ ಕಂಡು ನನ್ನ ಮಗನೂ ನಿನ್ನ ರೀತಿಯಲ್ಲಿದ್ದರೆ ನಾವು ತುಂಬಾ ಸುಖಕರ ಜೀವನವನ್ನು ಆರಂಭಿಸುವರೇನೂ ಎಂದು ನೊಂದುಕೊಳ್ಳುತ್ತಿದ್ದರು.

ಈ ಕತೆಯ ವಸ್ತು ಅಮೆರಿಕಾದಲ್ಲಿ ಜನರು ಯಾವ ರೀತಿಯಲ್ಲಿ ಸಂಬಂಧವನ್ನು ಬಳಸಿಕೊಳ್ಳುತ್ತಿದ್ದರು ಎನ್ನುವುದು ಮುಖ್ಯವಾಗಿ ತಿಳಿಸುತ್ತದೆ. ಅಲ್ಲವೇ ಅಲ್ಲಿ ಮನಷ್ಯರ ಸಂಬಂಧದ ಮಹತ್ವ ಯಾವ ರೀತಿಯಲ್ಲಿದೆ ಎಂಬುದನ್ನು ತಿಳಿಸುತ್ತದೆ. ಈ ರೀತಿಯ ಪರಿಸ್ಥಿತಿಯನ್ನು ಭಾರತದಲ್ಲಿ ಕಾಣಲು ಸಾಧ್ಯವೇ ಆಗುವುದಿಲ್ಲ. ಪ್ರೀತಿ–ಪ್ರೇಮಗಳಿದ್ದರೂ ಸಂಬಂಧವು ಬೆಳಸಲು ಒಂದು ಕ್ರಮಬದ್ಧತೆಯನ್ನು ಕಾಣಬಹುದು. ಇದು ಪ್ರದ್ಯೂಮ್ನನಲ್ಲಿ ನೋಡಬಹುದು.

ಶಶಧರ ತಾಯಿ ವಿಶಿಷ್ಟವಾಗಿರುತ್ತಾಳೆ ಆದರೂ ಮಗನೂ ಎಲ್ಲಾ ರೀತಿಯಲ್ಲಿಯೂ ವಿರುದ್ಧವಾಗಿರುತ್ತಾನೆ. ಪ್ರದ್ಯುಮ್ನನಲ್ಲಿ ಬೇಡಿಕೊಳ್ಳುತ್ತಾಳೆ ಶಶಿಧರ ಈ ರೀತಿಯ ಸಂಬಂಧ ಬಗ್ಗೆ ಭಾರತದಲ್ಲಿ ಚರ್ಚೆ ಮಾಡಬೇಡ ಈ ರೀತಿಯ ಅನೇಕ ಸಮಸ್ಯೆಗಳನ್ನು ಅಮೇರಿಕಾದಲ್ಲಿ ನೋಡಬಹುದು ನಳಿನಿ ಪ್ರದ್ಯುಮ್ನನನ್ನು ಮದುವೆಯಾಗುವ ಪ್ರಶ್ನೆ ತೆಗೆದಾಗ ನಾನು ಭಾರತದಲ್ಲಿ ನೋಡಿದ ತಂದೆ–ತಾಯಿ ಹಿರಿಯರ ಇಚ್ಚೆಯ ಮೇರೆಗೆ ಗೌರಮ್ಮನನ್ನು ಮದುವೆಯಾಗುವುದು ಹೇಳಿರುತ್ತಾನೆ. ಅಲ್ಲಿನ ಕಲ್ಚರ್‌ಗೂ ನಮಗೂ ಹಲವಾರು ರೀತಿಯ ವ್ಯತ್ಯಾಸವನ್ನು ನೋಡಬಹುದು ಪ್ರದ್ಯುಮ್ನ ತಂದೆ–ತಾಯಿ ಇವನನ್ನು ನೋಡಲು ಅಲ್ಲಿನ ಪರಿಸರವು ವಿಚಿತ್ರವಾಗಿರುತ್ತದೆ. ವಿಭಿನ್ನತೆಯಿಂದ ಕೂಡಿರುತ್ತದೆ. ಶಶಿ ಅಮೆರಿಕಾದಲ್ಲಿ ಹುಟ್ಟಿ ಬೆಳೆದಿರುವುದರಿಂದ ಅಲ್ಲಿನ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುತ್ತಾನೆ. ನಾನು ಭಾರತದಲ್ಲಿ ಹುಟ್ಟಿ ಬೆಳೆದುದರಿಂದ ನಾನು ಇಲ್ಲಿನ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದೇನೆ ಎಂಬುದಾಗಿ ಹೇಳುತ್ತಾನೆ.

ನೀರಜಾ ಮತ್ತು ಜನಾರ್ದನ ತಾವು ಪ್ರವಾಸ ಹೋಗಿದ್ದ ಅನೇಕ ರೀತಿಯ ಸ್ಥಳಗಳನ್ನು ನೆನಪುಗಳನ್ನು ಮುಂದುವರಿಸುತ್ತಾರೆ. ದೇವರಾಯದುರ್ಗಕ್ಕೆ ಹೋದ ಅನೇಕ ನೆನಪುಗಳು ಬರುತ್ತವೆ. ನಳಿನಿ ನ್ಯೂಯಾರ್ಕಿನಿಂದ ಬೆಂಗಳೂರಿಗೆ ಬರುತ್ತಾರೆ. ದೇವರಾಯದುರ್ಗಕ್ಕೆ ಪೂಜೆಗೆ ಹೊರಡುತ್ತಾರೆ. ಅವರ ಮುಂಚೆಯೇ ಜನಾರ್ದನರವರು ತನ್ನ ಮಗ ಪ್ರದ್ಯುಮ್ನ ಮಿಸಿಂಗ್ ವಿಷಯವನ್ನು ದೇವರ ಹತ್ತಿರ ಬೇಡಿ ಒಳ್ಳೆಯದಾಗಬೇಕು, ನನ್ನ ಮಗ ಹಿಂದುರಿಗಿ ಬರಬೇಕು ಎಂಬುದಾಗಿ ದೇವರಲ್ಲಿ ಬೇಡಿಕೊಳ್ಳುತ್ತಾರೆ. ಈ ಕತೆ ಅಮೆರಿಕಾದಲ್ಲಿ ಬೆಳದಿರುವವರಿಗೂ ಭಾರತದಲ್ಲಿ ಬೆಳದಿರುವವರಿಗೂ ಯಾವ ಯಾವ ರೀತಿಯ ವ್ಯತ್ಯಾಸವನ್ನು ಹೊಂದಿದ್ದಾರೆ ಎಂಬುದನ್ನು ನೋಡಬಹುದು. ಶಶಿಧರ ಮತ್ತು ಪ್ರದ್ಯುಮ್ನ ಅವರ ಪ್ರೀತಿಯ ಬೆಳವಣಿಗೆಯನ್ನು ನೋಡಬಹುದು. ಅವರಿಬ್ಬರಲ್ಲಿ ಆಗುವಂತಹ ವ್ಯತ್ಯಾಸವನ್ನು ಕಾಣಬಹುದು. ಈ ಕತೆಯಲ್ಲಿ ಮುಖ್ಯವಾಗಿ ಅಮೆರಿಕಾ ಜೀವನವನ್ನು ಗಮನಿಸಬಹುದು.

'ಪರಕೀಯ' ಎಂಬ ಕತೆಯಲ್ಲಿ ಅನಾಥಾಶ್ರಮದ ಚಿತ್ರಣವನ್ನು ಹೊಂದಿದೆ. ಇದರಲ್ಲಿ ಅನೇಕ ರೀತಿಯ ಮಹಿಳೆಯರು ಜೀವನದಲ್ಲಿ ಬೇಸತ್ತು ಇಲ್ಲಿ ನೆಲಸಿರುವುದನ್ನು ನೋಡಬಹುದು. ಒಬ್ಬೊಬ್ಬರು ಒಂದು ರೀತಿಯ ಸಮಸ್ಯೆಯನ್ನು ಹೊಂದಿರುತ್ತಾರೆ. ಒಂದು ಕುಟೀರವನ್ನು ಹೊಂದಿರುತ್ತದೆ. ಅಲ್ಲಿ ಅನೇಕ ರೀತಿಯ ಜನ ವಾಸಿಸುವುದನ್ನು ಕಾಣಬಹುದು ಆ ಕುಟೀರದಲ್ಲಿ ಅನೇಕ ರೀತಿಯ ಮನೆಗಳಿರುತ್ತವೆ. ಅದರಲ್ಲಿ ೩ ನೇ ನಂಬರ್ ಕುಟೀರದಲ್ಲಿ ಸುಂದರಮ್ಮ, ಸುನೀತಾ, ಸರಸಿ ಮತ್ತು ಝೂನ್ಸಿಬಾಯಿ ಹಲವಾರು ಜನ ಇರುತ್ತಾರೆ. ಒಬ್ಬೊಬ್ಬರದು ಒಂದೊಂದು ರೀತಿಯ ಚಿತ್ರಣವನ್ನು ಕಾಣಬಹುದಾಗಿದೆ.

ಸುಂದರಮ್ಮನ ವಯಸ್ಸು ಎಪ್ಪತ್ತೈದು ಆಗಿರುತ್ತದೆ. ದಢೂತಿ ಹೆಂಗಸು, ಉಬ್ಬ ಹಲ್ಲು, ಕಪ್ಪು ಬಣ್ಣದಿಂದ ಕೂಡಿದ ಕೂದಲನ್ನು ಹೊಂದಿರುತ್ತಾಳೆ ಅನಾಥಶ್ರಮದಲ್ಲಿ ಸುಂದರಮ್ಮನನ್ನು ಕಂಡರೆ ಎಲ್ಲರೂ ಸ್ವಲ್ಪ ಭಯ ಪಡುತ್ತಾರೆ. ಇವರಿಗೆ ಒಬ್ಬನೇ ಮಗ. ಅವನು ಅಮೆರಿಕಾದಲ್ಲಿ ಇಂಜಿನಿಯರ್ ಆಗಿರುತ್ತಾನೆ. ಅಲ್ಲಿನ ಹುಡುಗಿಯೊಂದಿಗೆ ವಿವಾಹವಾಗಿರುತ್ತಾನೆ. ಅವರು ಈಕೆಯನ್ನು ಕರೆದರೂ ಈ ನೆಲ, ಜಲ, ಈ ಪ್ರದೇಶವನ್ನು ಬಿಟ್ಟು ಹೋಗಲು ಸಿದ್ಧಳಿಲ್ಲದೆ ಅನಾಥಾಶ್ರಮದಲ್ಲಿಯೇ ಸೇರಿರುತ್ತಾಳೆ. ಸ್ವಲ್ಪಮಟ್ಟಿಗೆ ದೇವರಲ್ಲಿ ನಂಬಿಕೆಯನ್ನು ಹೊಂದಿರುತ್ತಾಳೆ.

ಸುಂದರಮ್ಮನ ಪಕ್ಕದ ಮನೆಯಲ್ಲಿ ಸರಸಿಯು ಇರುತ್ತಾಳೆ. ಇವಳ ಮಾತುಗಳು ಯಾವಾಗಲು ಹಾಸ್ಯಯಿಂದ ಕೂಡಿರುತ್ತದೆ. ಯಾವಾಗಲೂ ಸಾವಿನ ಬಗ್ಗೆ ಹೆಚ್ಚಿನದಾಗಿ ಮಾತಾಡುವುದೇ ಅವಳ ಕೆಲಸವಾಗಿರುತ್ತದೆ. ಅವರ ತಂದೆ ತಹಸೀಲ್ದಾರನಾಗಿರುತ್ತಾನೆ. ಬಾಲ್ಯದಲ್ಲಿ ವಿವಾಹವಾಗಿರುತ್ತಾನೆ. ಗಂಡನನ್ನು ಕಳೆದುಕೊಂಡು ವಿಧವೆಯಾಗಿರುತ್ತಾಳೆ. ಇವಳು ಸ್ವಲ್ಪ ಶ್ರೀಮಂತಿಕೆಯ ಜೀವನವನ್ನು ಆರಂಭಿಸುತ್ತಾಳೆ. ಅವಳಿಗೆ ಹಳ್ಳಿಯಲ್ಲಿ ಚಿಕ್ಕ ಮನೆ ಸ್ವಲ್ಪ ಆಸ್ತಿಯನ್ನು ಕೊಟ್ಟಿರುತ್ತಾರೆ. ಅದನ್ನು ಮಾರಿ ಈಕೆಯು ಅನಾಥಾಶ್ರಮವನ್ನು ಸೇರಿರುತ್ತಾಳೆ.

ಝೂನ್ಸಿಬಾಯಿ ಮಡಿಕೇರಿಗೆ ಬಂದು ನೆಲಸಿದಳು. ಚಿಕ್ಕ ವಯಸ್ಸಿನಲ್ಲಿಯೇ ಅನಾಥಾಶ್ರಮವನ್ನು ಸೇರಿರುತ್ತಾಳೆ. ಅವಳು ಸಾಕಷ್ಟು ರೀತಿಯ ಬಂಗಾರವನ್ನು ಹೊಂದಿದ್ದು ಕೊಡಗಿನ ಶೈಲಿಯನ್ನು ಹೊಂದಿರುತ್ತಾಳೆ. ಶ್ರೀಮಂತಿಕೆಯ ಜೀವನವನ್ನು ನಡೆಸಿದ ಝೂನ್ಸಿಬಾಯಿಗೆ ಅಲ್ಲಿನ ವಾತಾವರಣಕ್ಕೆ ಹೊಂದಿಕೊಳ್ಳುವುದು ತುಂಬಾ ಕಷ್ಟಕರವಾಗಿರುತ್ತದೆ.

ಈ ಕಥೆಯ ಮುಖ್ಯಾ ಪಾತ್ರದಾರಿಯಾಗಿರುವಲು ಸುನೀತಾ ಸುಂದರಿಯಾಗಿರುತ್ತಾಳೆ ಚಿಕ್ಕವ ಯಸ್ಸಿನಲ್ಲಿಯೇ ಅನಾಥಶ್ರಮವನ್ನು ಸೇರಿರುತ್ತಾಳೆ. ಇವಳು ಮಾನಸಿಕವಾಗಿ ನೊಂದಿರುತ್ತಾಳೆ. ಸುನೀತಾಳನ್ನು ಕಂಡರೆ ಸುನಂದಮ್ಮನವರಲ್ಲಿ ಒಂದು ರೀತಿಯ ಅಭಿಮಾನವನ್ನು ಹೊಂದಿರುವಲು ಅವಳಿಗೆ ಎಲ್ಲಾ ರೀತಿಯ ಸಹಾಯವನ್ನು ಸಹಮಾಡುವವಳು ಇವರ ಸಂಬಂಧವು ತಾಯಿ–

ಮಗಳ ಹಾಗೇ ಮುಂದುವರಿಯುತ್ತದೆ. ದಿನಾಲು ಸಂಜೆಯ ಹೊತ್ತಿನಲ್ಲಿ ಇಡೀ ಅನಾಥಾಶ್ರಮದಲ್ಲಿ ವಾಸವಾಗಿದ್ದ ಎಲ್ಲರ ಬಗ್ಗೆಯೂ ಚರ್ಚೆ ನಡೆಯುತ್ತಿರುತ್ತದೆ. ಸುನೀತ ಮತ್ತು ಸುಂದರಮ್ಮನವರ ಸಂಬಂಧ ಬಗ್ಗೆಯೂ ಯಾರಲ್ಲಿಯೂ ಗೊಂದಲುಗಳು ಉಂಟಾಗುತ್ತಿರಲಿಲ್ಲ. ಸುನೀತಾ ಮನೆಗೆ ಒಬ್ಬ ಪತ್ರಕರ್ತೆ ಭೇಟಿ ಕೊಟ್ಟಿರುತ್ತಾನೆ. ಅದು ಸುಂದರಮ್ಮಳಗೆ ಗೊತ್ತಿರುವುದಿಲ್ಲ. ಎಲ್ಲರೂ ಆಕೆಯನ್ನು ಕೇಳಿದಾಗ ನನ್ನ ವಿವರವನ್ನು ಕೇಳಲು ಬಂದಿದ್ದರು ಎಂಬ ವಿಷಯ ತಿಳಿದಾಗ ನಿನ್ನ ಬಾಲ್ಯದ ವಿವರಗಳು ನಾನು ತಿಳಿದಿದ್ದೇನೆ ನಾನು ನಿಮ್ಮೂರಿನವಳು, ಸುನೀತಾಳ ತಾಯಿ ಶೆಟ್ಟಿ ಜೊತೆ ಓಡಿಹೋಗಿರುತ್ತಾಳೆ. ತಂದೆ ಸ್ವಲ್ಪದಿನಕ್ಕೆ ಚಿಕ್ಕಪ್ಪನನ್ನು ಕರೆದು ಬರುತ್ತಾನೆ ಈ ರೀತಿಯ ಘಟನೆ ಎಲ್ಲರಲ್ಲಿಯೂ ಕನಿಕರವು ಉಂಟಾಗಿತ್ತು. ಈ ರೀತಿಯ ವಿಷಯವನ್ನು ತಿಳಿದು ಮುಂಜಾನೆಯಲ್ಲಿ ನೇಣುಹಾಕಿಕೊಂಡು ಸಾವನ್ನಪ್ಪುತ್ತಾಳೆ. ಅವಳ ಮರಣಕ್ಕೆ ಮಾನಸಿಕವಾಗಿ ನೊಂದು ಸಾವನ್ನಪ್ಪಿದ್ದಾಳೆ.

ಈ ರೀತಿಯ ಅನೇಕ ಸಮಸ್ಯೆಗಳನ್ನು ಹೊಂದಿರುತ್ತಾನೆ ಅವರೆಲ್ಲರೂ ಅನಾಥಾಶ್ರಮದಲ್ಲಿ ಇರುತ್ತಾರೆ. ಸುನೀತಾ ಮರಣಕ್ಕೆ ಕೆಲವೊಂದು ಕಾರಣಗಳು ಪ್ರಮುಖವಾಗಿರುತ್ತವೆ.

'ನನ್ನಮ್ಮ ಎಲ್ಲರಂತಲ್ಲ' ಎಂಬ ಕತೆಯಲ್ಲಿ ತಾಯಿ ಮತ್ತು ಮಗನ ಸಂಬಂಧದ ಕುರಿತು ಚಿತ್ರಿಸಲಾಗಿದೆ. ಮಗನಲ್ಲಿ ಯಾರಿಗೂ ಆಗದಂತೆ ಘಟನೆಯೊಂದು ನಡೆಯುತ್ತದೆ. ಆದರೂ ತಾಯಿ ತನ್ನ ಮಗನನ್ನು ಸಮಧಾನ ಮಾಡಿಸುವ ರೀತಿಯನ್ನು ನೋಡಬಹುದು. ನೀಲಿ ಜಿನ್ಸ್, ಕೆಂಪು ಶರ್ಟಿನ ನೆನಪು ಬಹಳ ರೀತಿಯಲ್ಲಿ ಕಾಡುತ್ತಿರುತ್ತದೆ. ಕಾಲೇಜಿನ ಆಡಿಟೋರಿಯಂನಲ್ಲಿ ನಡೆದ ಹೆಚ್‌ಐವಿ ಎಂಬ ಕಾರ್ಯಕ್ರಮದಲ್ಲಿ ಆಕೆಯ ಪರಿಚಯವು ಬೆಳೆಯುತ್ತದೆ. ಇಬ್ಬರಲ್ಲಿ ಪ್ರೀತಿ ಬೆಳೆದು ಸಂಬಂಧ ಬೆಳೆಸಿರುತ್ತಾರೆ. ನಂತರ ಆ ನೆನಪು ಮಾತ್ರ ಇವನಿಗೆ ಉಳಿದು ಆಕೆಯು ದೂರವಾಗುತ್ತಾಳೆ. ಇವನಿಗೆ ಅವರ ತಾಯಿಯನ್ನು ಕಂಡರೆ ತಂಬಾ ಪ್ರೀತಿವಾತ್ಸಲ್ಯವನ್ನು ಹೊಂದಿರುತ್ತಾನೆ. ಈ ವಿಷಯವನ್ನು ತಾಯಿಗೆ ತಿಳಿಸಲು ಎಲ್ಲರಂತಲ್ಲ ನನ್ನಮ್ಮ ಎಂಬುದಾಗಿ ಕೊರಗುತ್ತಾನೆ. ಅವಳ ಮೊಬೈಲ್‌ನಲ್ಲಿ ಅವನ ಬೆತ್ತಲೆಯ ಚಿತ್ರಗಳನ್ನು ಹೊಂದಿರುತ್ತಾಳೆ. ಅದು ಅವನಿಗೆ ಪದೇ ಪದೇ ನೆನಪಿಗೆ ಬರುತ್ತಿರುತ್ತದೆ. ಅವನು ಎಲ್ಲಾ ಮರೆತು ಪ್ರಾಣವನ್ನು ಕಳೆದುಕೊಳ್ಳಲು ಪ್ರಯತ್ನ ಮಾಡಿರುತ್ತಾನೆ. ಆದರೆ ತಾಯಿಯ ನೆನಪು ಮರೆಯಲು ಸಾಧ್ಯವಾಗುವುದಿಲ್ಲ. ಅಮ್ಮನಿಂದ ಯಾವುದೇ ರೀತಿಯಲ್ಲಿಯೂ ಕೊರತೆಯಿರುವುದಿಲ್ಲ. ಅವರ ಸಂಬಂಧ ತುಂಬಾ ಅರ್ಥಗರ್ಭಿತವಾಗಿರುತ್ತದೆ. ಮಣಿಪಾಲ್ ಆಸ್ಪತ್ರೆಯಲ್ಲಿ ಬ್ಲಡ್ ಚೆಕಪ್ ಮಾಡಿಸಿದಾಗ ಅದರಲ್ಲಿ ಪಾಸಿಟಿವ್ ಬಂದಿರುತ್ತದೆ ಅದು ಆಕೆಗೆ ತಿಳಿಯುತ್ತದೆ. ತಾಯಿಯು ಸಮಾಧಾನದಿಂದ ಎಲ್ಲಾ ನನಗೆ ಗೊತ್ತು ಎಂಬ ವಿಷಯವನ್ನು ಹೇಳುತ್ತಾಳೆ. ಅಮ್ಮ ಅದು ಹೇಗೆ ಬಂತು ಎಂಬ ವಿಷಯವನ್ನು ಹೇಳಿದಾಗ, ನಾಳೆಯನ್ನು ಧೈರ್ಯವಾಗಿ ಎದುರಿಸೋಣ ಎಂದು ಮಗನಿಗೆ ಸ್ಫೂರ್ತಿ ತುಂಬುತ್ತಾಳೆ.

ಒಬ್ಬರಿಗೊಬ್ಬರು ಪ್ರತಿ ವಿಷಯದಲ್ಲಿ ಮನಸ್ಸಿನ ಭಾವನೆಗಳನ್ನು ಹಂಚಿಕೊಳ್ಳುತ್ತಾರೆ. ಯಾವುದೆ ರೀತಿಯಲ್ಲಿಯೂ ಬೇಧ-ಭಾವ ಕಂಡುಬರುವುದಿಲ್ಲ ತಾಯಿಯು ತಮ್ಮ ಮಗನನ್ನು ಕಾಪಾಡಿಕೊಳ್ಳುವುದೇ ಆಕೆಯ ಕರ್ತವ್ಯವಾಗಿರುತ್ತದೆ.

'ಸರೋವರ' ಎಂಬ ಕತೆಯು ಪ್ರವಾಸವನ್ನು ಒಳಗೊಂಡಿದೆ. ಅಮೆರಿಕಾದಲ್ಲಿ ಜೀವಿಸುವ ಕಮಲ ಭಾರತಕ್ಕೆ ಬಂದಾಗ ಆ ಪರಿಸರಕ್ಕೂ ಇಲ್ಲಿನ ಪರಿಸರಕ್ಕೂ ವ್ಯತ್ಯಾಸವನ್ನು ನೋಡಬಹುದು. ಅಲ್ಲಿ ಪ್ರತಿಯೊಂದು ಕೆಲಸದಲ್ಲಿಯೂ ತಂತ್ರಜ್ಞಾನದ ಬಳಕೆಯನ್ನು ನೋಡಬಹುದು. ಜನರ ಜೀವನ ಶೈಲಿಯಲ್ಲಿಯೂ ಬದಲಾವಣೆಯನ್ನು ಹೊಂದಿದೆ. ಕಮಲಾರವರು ಪ್ರವಾಸಕ್ಕೆ ಹೋದಾಗ ಅಲ್ಲಿನ ಅನುಭವದ ಚಿತ್ರಣಗಳನ್ನು ಒಳಗೊಂಡಿದೆ. ಮನುಷ್ಯನ ಸಂಬಂಧಗಳು ಅಮೆರಿಕಾದಲ್ಲಿ ವಿಭಿನ್ನತೆಯಿಂದ ಕೂಡಿರುವುದನ್ನು ನೋಡಬಹುದು.

**ಕಾದಂಬರಿ-ನೂರುಸ್ವರ**

ಉಮಾರಾವ್‌ರವರು ಬರೆದಿರುವ 'ನೂರುಸ್ವರ' ಕಾದಂಬರಿ ಗೌರಿ ಎಂಬ ಆಧುನಿಕ ಹುಡುಗಿಯ ಸೂಕ್ಷ್ಮತೆಯ ತಲ್ಲಣದಲ್ಲಿ ತನ್ನನ್ನು ತಾವು ಹುಡುಕಿಕೊಳ್ಳುತ್ತಾ ಬದುಕಿಗೆ ಸ್ವತಂತ್ರ್ಯವಾಗಿ ನಿರ್ಭೀತವಾಗಿ ತೆರೆದುಕೊಳ್ಳುವ ಅವಳ ಜೀವಂತಿಕೆಯನ್ನು ಅರಿಯಲು ನಡೆಸಿದ ಒಂದು ಯತ್ನವನ್ನು ಒಳಗೊಂಡಿದೆ.

"ವ್ಯಾನಿಲಾ ಐಸ್‌ಕ್ರೀಂವಿದ್ ಚಾಕೊಲೇಟ್ ಸಾಸ್" "ಸೇಮ್ ಫಾರ್ ಮಿ!" ಎಂಬುದರಿಂದ ಆರಂಭವಾಗುತ್ತದೆ. ಮೈಸೂರಿನ ವಕೀಲ ಸೀತಾರಾಮರಾಯರ ಇಬ್ಬರು ಹೆಣ್ಣುಮಕ್ಕಳಲ್ಲಿ ಮೊದಲ ಮಗಳು ಗೌರಿ. ಕೃಷ್ಣವರ್ಣದ ಲಕ್ಷಣವಂತೆ. ಅಜ್ಜಿಗೆ ಜಾಸ್ತಿ ಪ್ರೀತಿಯವಳು. ಬಣ್ಣ, ಭದ್ರತೆ, ಬಾಯಿ ಪಾಠದ ಬದುಕಿನ ಕಡೆಗೆ ವಾಲಿಕೊಂಡಿರುವ ತಾಯಿಗೆ ಮಗಳು ಪಾಪನ್ನು ಕಂಡರೆ ಅಚ್ಚು ಮೆಚ್ಚು ತನ್ನನ್ನು ನೋಡಲು ಬಂದ ಹುಡುಗ ತಂಗಿ ಪಾಪನ್ನ ಆರಿಸಿ ಮದುವೆಯಾದಾಗ ಸ್ವಭಾವತಃ ಅಂತರ್ಮುಖಿ ಹುಡುಗಿ ಗೌರಿಯ ಜೀವನದಲ್ಲಿ ತಿರುವು ಕಾಣುತ್ತದೆ. ಆಕೆ ಮೈಸೂರು ಬಿಟ್ಟು ಸೇರುತ್ತಾಳೆ. ಅಲ್ಲಿ ಆ್ಯಡ್ ಕಂಪಿನಿಯ ಉದ್ಯೋಗ, ಮಕ್ಕಳಿಗೆ ಟ್ಯೂಶನ್, ಕಲಾ ಪ್ರದರ್ಶನ ವೀಕ್ಷಣೆ, ಮನಸ್ಸಾದಾಗ ಚಿತ್ರ, ಕವನ ಬರೆಯುತ್ತ, ಮುಂಬೈಯ ನೆರೆಹೊರೆ, ಸಂಸಾರದಲ್ಲಿ ರೂಢಿಯೊಳಗೆ ರೂಢಿಗೊಂಡು ಬಿಟ್ಟ ಅವರ ಜೀವನಕ್ರಮವನ್ನು ಅಚ್ಚರಿಯಿಂದ ಗ್ರಹಿಸುತ್ತ ತಾನು ಸ್ಪಷ್ಟಗೊಳುತ್ತ ಇರುತ್ತಾಳೆ. ಪ್ರೇಮಿಗಾಗಿ ಮಗ ಬೆಂಚುವನ್ನು ಬೋರ್ಡಿಂಗ್‌ಗೆ ಸೇರಿಸಲು ಬಯಸುವ ಲತಾ, ಸಾಮಾನ್ಯ ಮಾದರಿಯ ಗೃಹಿಣಿ ಪೂನಂ, ವಿಕೃತ ಮನದ ಶಾಂ, ಗಂಡ ಮನೆಗೆ ಕರೆತಂದ ರಂಡಿಗೆ ಬೈಯುತ್ತಲೇ ಉಡಲು ಸೀರೆ ಕೊಟ್ಟು ಕೆಲಸಕ್ಕೆ ಬರುವ ರಕುಮಾ ಇವರು ಎಲ್ಲರೂ ಕಾದಂಬರಿಯಲ್ಲಿ ಬರುವಂತಹವರು. ಆದರೆ ಕಾದಂಬರಿಯಲ್ಲಿ ಮಿಡಿಯುವ ಅವರ ಸ್ವರಕ್ಕೆ ಗೌರಿಯೆಂದರು ಹೊಸ ಕಂಪನವಿರುತ್ತದೆ.

ಮುಂಬೈ ನಗರದ ನಾನಾ ಮುಖಗಳು ರೈಲು ಹತ್ತುವ ಇಳಿಯುವ ನಾನಾ ಹೊಟ್ಟೆಪಾಡುಗಳು, ದುಖಃ, ಸಂಕಟ, ಸಾವು–ನೋವು ಮತ್ತು ಬಾಯಿ ಈ ಎಲ್ಲದರ ನಡುವೆ ಚಿಂತಕ ಮನದ ಇರುತ್ತಾಳೆ. ಅವಳ ಪ್ರಪಂಚವೇ ವಿಭಿನ್ನ ರೀತಿಯಲ್ಲಿ ರೂಪಿಸುವುದೇ ಅವಳ ಧ್ಯೇಯವಾಗಿರುತ್ತದೆ.

ಗೌರಿಯ ಕಲಾಪ್ರೇಮಿ, ಕವಿ ಹೃದಯಕ್ಕೆ ಆಫೀಸಿನಲ್ಲಿ ಒಂಭತ್ತರಿಂದ ಐದರವರೆಗೆ ಕೆಲಸಮಾಡಬೇಕೆಂದರೆ ಭೀತಿ, ಬೇಕೆಂದಾಗ ಕತೆ, ಕಾದಂಬರಿ ಓದುವುದರ ಬದಲು ಆ ಹೊತ್ತಿನಲ್ಲಿ ಆಫೀಸಿನ ವ್ಯವಹಾರ ದನಿಗಳನ್ನು ಕೇಳಬೇಕೆಂದರೆ ಕೈಕಾಲು ತಣ್ಣಗೆ ಆಗುವಂತಹದು. ಜೊತೆಗೇ ಸ್ವಂತ ಸಂಪಾದನೆಯ, ಸ್ವಾವಲಂಬನೆಯ ಇಚ್ಛೆ ಗೌರಿ ಉದ್ಯೋಗ, ಪತಿ, ನೆಮ್ಮದಿಯ ಬದುಕು ಇತ್ಯಾದಿ ಸುಭದ್ರ ಜೀವನದಲ್ಲಿ ಕರಗಿಹೋಗಬಯಸುವ ಹುಡುಗಿಯಾಗಿರುವುದಿಲ್ಲ. ತಂಗಿ ಪಾಪಳ ಪತ್ರ, ಕಾಡುವ ಅವಳ ನೆನಪು, ತಾಯಿಯ ಮಾತು ನಡವಳಿಕೆಯನ್ನು ಆಕೆ ಎದುರಿಸುವ ಮತ್ತು ಹಂಚಿಕೊಳ್ಳುವ ಬಗೆ ಅಜ್ಜಿಯ ನೆನವರಿಕೆಯಲ್ಲಿ ಲೇಖಕಿ ಸಮರ್ಥವಾಗಿ ಸೂಚಿಸುತ್ತಾ ಹೋಗುತ್ತದೆ. ಗೀರಿಶ (ಪಾಪನಗಂಡ) ತನ್ನನ್ನು ಮದುವೆಯಾಗಿದ್ದರೆ ಖಂಡಿತ ತಾನು ಇಂದಿನ ತಾಯಿ ತಾನಾಗಿರುತ್ತಿರಲಿಲ್ಲವೆಂದು ತನ್ನ ಬಗ್ಗೆ ಅಭಿಮಾನ ಪಡುವ ಗೌರಿಗೆ ಈಗಾಗಲೇ ಅವರೆಲ್ಲರಿಗಿಂತ ತನ್ನ ಮನೋಭಿನ್ನತೆಯ ಅರಿವಾಗಿದೆ. ಎಂತಲೇ ಶಾಂತಾ ರಾಮನಂಥವರನ್ನು ಮದುವೆಯಾಗಲು ಆಕೆಗೆ ಸಾದ್ಯವಾಗುವುದಿಲ್ಲ. ಎತ್ತಿ ತೋರಿಸಲು ಏನೂ ದೋಷವಿಲ್ಲದೆಯೂ ಇನ್ನೂ ಅನೇಕ ವರ–ಸಂಬಂಧಗಳನ್ನು ಗೌರಿ ತಳ್ಳಿಹಾಕಿರುತ್ತಾಳೆ.

ಈ ಕಾದಂಬರಿಯಲ್ಲಿ ಹೊಸ ರೀತಿಯ ಸಂಬಂಧಗಳ ಹೊಸ ಪರಿಸರ ವಿಭಿನ್ನ ಜೀವನ ಶೈಲಿಯು ಕಂಡುಬರುತ್ತವೆ. ಗೌರಿ ಬದುಕು ಹೊಸ ಪ್ರಪಂಚದಲ್ಲಿರುವುದನ್ನು ನೋಡಬಹುದು. ಒಂದರಿಂದ ಇನ್ನೊಂದು ತಾನಾಗಿಯೇ ಅವು ಸಂಬಂಧ ಕಟ್ಟಿಕೊಳ್ಳುತ್ತಾ ಹೋಗುತ್ತವೆ. ಈ ಎಲ್ಲವೂ ಕಾದಂಬರಿಯ ವೈಶಿಷ್ಟವಾಗಿವೆ.

ಎಲ್ಲರಿಂದ ದೂರ ಹೋಗಬೇಕು ಹೊರಗೆ ನಡೆದು ಬಿಡಬೇಕು, ಎಂಬುದು ಗೌರಿಯ ನಿರೀಕ್ಷೆಯಾಗಿರುತ್ತದೆ. ತುಂಬಾ ತಿರುಗಾಡಬೇಕು, ಇಷ್ಟು ದಿನ ಅನಿರುದ್ಧನಿಗಾಗಿ ಕಾದು ಕೂತಿರುವುದು ಗೌರಿಯ ವಾದವಾಗಿತ್ತು. ತಾನೇಕೆ ಲಕ್ಷ್ಮೀಯಂತೆ ಅವರಿಗೆ ಅದಿಷ್ಟು ಇದಿಷ್ಟು ಅಂತೆಲ್ಲ ಹೆಮ್ಮೆ ಪಟ್ಟುಕೊಳ್ಳುತ್ತ ಇರಲಾಗದು. ಅವಳ ಈ ದ್ವಂದ್ವಗಳೆದುರು 'ಯೂ ಆರ್ ಡಿಫರೆಂಟ್' ಎಂದು ಅನಿರುದ್ಧ ಹೇಳುತ್ತಾನೆ. ತಾನು ಎಲ್ಲರಿಗಿಂತಲೂ ಹೆಚ್ಚು ಪ್ರೀತಿಸುವ ತಂದೆಯ ನೆನಪು ತಂದ ಅನಿರುದ್ಧ ತಂದೆ ಸೀತಾರಾಯರಲ್ಲಿ ಮಧುರ ಸ್ಮೃತಿಯಾಗಿ ಉಳಿದ ಕಮಲ ಎಂಬಾಕೆಯನ್ನು ನೆನಪಿಸಿದ. ಅವನ ಆಂಟಿ, ಚಿಂಚೂವಿನ ಅಸಹಾಯಕ ಬೆನ್ನನ್ನು ನೋಡಿದಾಗೆಲ್ಲ ತಂದೆ–ತಾಯಿರಿಲ್ಲದೆ ಆಂಟಿಯ ಜೊತೆ ಬೆಳೆದ ನೆನಪು ತರುವ ಕೆಲಸವನ್ನು ಅನಿರುದ್ಧ ಮಾಡುತ್ತಾನೆ.

ಈ ಘಟ್ಟದಲ್ಲಿ ಗೌರಿ ಮತ್ತು ಅಪರಿಚಿತ ಅನಿರುದ್ಧರ ಸಿನಿಮೀಯ ಭೇಟಿಯಲ್ಲಿ ಜಹಾಂಗೀರ್ ಆರ್ಟ್‌ಗ್ಯಾಲರಿಯ ಸರೋಟರ್‌ನಲ್ಲಿ ಐಸ್‌ಕ್ರೀಂ ಆರ್ಡರ್ ಮಾಡಿ ಕುಳಿತಾಗ ಸೇಮ್ ಫಾರ್ ಮಿ ಧ್ವನಿಯ ಮೂಲಕ ಅನಿರುದ್ಧ ಅವಳಲ್ಲಿ ಪ್ರವೇಶಿಸುತ್ತಾನೆ. ಆತನ ಹಿನ್ನೆಲೆ ಮುನ್ನೆಲೆ ಏನು-ಎಂತು ಒಂದೂ ತಿಳಿಯದೆ ಆತ ಗೌರಿಯ ಆಯ್ಕೆಯಾದ. ಗೌರಿ ಕಂಡ ನಿಮಿಷದಿಂದ ಇಷ್ಟವಾಗುತ್ತಲೇ ಹೋದ. ಆತನ ರೂಪದಲ್ಲಿ ಬಾಳಿನ ಸಂಭ್ರಮ ಆಕೆಯನ್ನು ಆವರಿಸಿತು.

ಮನೆಯ ತಲುಪುವ ಹೊತ್ತಿಗೆ ಪಕ್ಕದ ಪುನು ಪತ್ರದ ವಿಷಯವನ್ನು ಪ್ರೇಂ ಸೀತರಾಮ ಎಂಬ ಹೆಸರಿನಿಂದ ಎಂಬುದಾಗಿ ತಿಳಿಸುತ್ತಾಳೆ. ಪ್ರೇಂ ಎನ್ನುವುದು ತಾಯಿಯ ಪ್ರೀತಿಯಿಂದ ಕರೆಯುವಂತಹದು. ತಾಯಿಯು ಪತ್ರದಲ್ಲಿ ಹೆಣ್ಣು ಯಾವ ರೀತಿಯಲ್ಲಿ ಬಾಳಬೇಕು ಆಕೆಯು ಕಟ್ಟುನಿಟ್ಟುಗಳಿಂದ ಕೂಡಿದ ಜೀವನವಿರಬೇಕು ಎಂಬುದಾಗಿ ಹೇಳುತ್ತಾಳೆ. ಗೌರಿಗೆ ಈ ವಿಷಯವೇ ಬೇಸರ ವಿಷಯವಾಗಿರುತ್ತದೆ. ಪತ್ರವನ್ನು ಪಕ್ಕಕ್ಕಿಟ್ಟು ತನ್ನ ಮುಂದಿನ ಜೀವನವನ್ನು ಪ್ರಾರಂಭಿಸುತ್ತಾಳೆ. ಚಿಂಚೂ ಗೌರಿಯ ನಡುವೆ ಅನೋನ್ಯವಾದ ಸಂಬಂಧವನ್ನು ಹೊಂದಿರುತ್ತಾರೆ. ಚಿಂಚೂನ ಬೆಳವಣಿಗೆಗೆ ಗೌರಿಯೇ ಪ್ರಮುಖ ಕಾರಣವಾಗಿರುತ್ತಾಳೆ. ಚಿಂಚೂನ ಮನೋಸ್ಥಿತಿ ಎಲ್ಲವೂ ಗೌರಿಗೆ ಮಾತ್ರ ಅರ್ಥಮಾಡಿಕೊಳ್ಳಲು ಸಾಧ್ಯವಾಗಿರುತ್ತದೆ.

ಚಿಂಚೂನ ತಾಯಿ ಲತಾಗೆ ತನ್ನ ಪ್ರಿಯಕನ ಜೊತೆ ಕಾಲವನ್ನು ಕಳೆಯುವುದೇ ಸಮಯವಾಗಿರುತ್ತದೆ. ಚಿಂಚೂ ಗೌರಿಯ ಬಳಿ ತನ್ನ ಹೆಚ್ಚಿನ ಸಮಯವನ್ನು ಕಳೆಯುತ್ತಿರುತ್ತಾನೆ. ಹಾಗೆಯೇ ಇಂಗ್ಲೀಷ್ ಕಲಿಯಲು ಬರುತ್ತಿದ್ದವರು ನೀಮಾ-ರೀಮಾ ಅವಳ-ಜವಳಿ ಮಕ್ಕಳು. ಇಂಗ್ಲೀಷ್ ಬರದೇ ಹೋದರೆ ಈಗಿನ ಕಾಲದಲ್ಲಿ ಜೀವನ ಮುಂದುವರೆಸಲು ಸಾಧ್ಯವಿಲ್ಲ ಎಂಬುದು ಅವರ ವಾದವಾಗಿತ್ತು. ಗೌರಿಯು ಅನಿರುದ್ಧನನ್ನು ಭೇಟಿಯಾಗಲು ಹೊರಗೆ ತನ್ನ ಮನಸ್ಸಿನಲ್ಲಿ ಅನೇಕ ರೀತಿಯ ಕಳವಳವು ತನ್ನ ಮನಸ್ಸಿನಲ್ಲಿ ಉಂಟಾಗುತ್ತೆ. ಅವನನ್ನು ಭೇಟಿಯಾಗಲು ಅನೇಕ ರೀತಿಯ ತಯಾರಿಯನ್ನು ನಡೆಸುತ್ತಾಳೆ. ಸೀರೆಯನ್ನು ಉಡುವುದರಿಂದ ಹಿಡಿದು ಎಲ್ಲಾ ರೀತಿಯ ವಿಭಿನ್ನತೆಯನ್ನು ಸೂಚಿಸುತ್ತಾಳೆ. ಲತಾಳು ತನ್ನ ಪ್ರಿಯಕರನ ಜೊತೆ ಚಿಂಚೂನ ಡವಲಪಮೆಂಟ್‌ನ ಬಗ್ಗೆ ಗೌರಿಯಲ್ಲಿ ತಿಳಿಸಿ ಹೊರಡುತ್ತಾಳೆ. ಶಾಂತಿಯು ತಾಯಿಯಿಲ್ಲದೆ ಅಜ್ಜಿಯ ಆಸರೆಯಲ್ಲಿ ಬೆಳೆದಿರುತ್ತಾಳೆ. ಆಕೆಯು ತನ್ನಲ್ಲಿ ಆದ ಭಯ ಆತಂಕವನ್ನು ತೀರಿಸಿಕೊಳ್ಳುವುದಕ್ಕೆ ಶಾರದಾ ಮೇಡಂ ಪ್ರಮುಖವಾಗಿರುತ್ತಾಳೆ. 'ಡೋಂಟ್ ಗೆಟ್ ಪರ್ಸನಲ್' ಎಂಬುದಾಗಿ ತಿಳಿಸುತ್ತಾಳೆ.

ಸಂಬಂಧಗಳು ಅನೇಕ ರೀತಿಯಲ್ಲಿ ವಿಭಿನ್ನತೆಯನ್ನು ಹೊಂದಿರುತ್ತಾಳೆ. ಹೆಣ್ಣು ಯಾವುದರಲ್ಲಿಯೂ ಕಡಿಮೆಯಲ್ಲ, ಆಕೆಯು ಎಲ್ಲ ರೀತಿಯಲ್ಲಿಯೂ ಪರಿಣಿತಿಯನ್ನು ಪಡೆದಿರುವುದನ್ನು ನೋಡಬಹುದು. ಗೌರಿಯ ಜೀವನ ಎಲ್ಲಾ ರೀತಿಯಲ್ಲಿಯೂ ಬದಲಾವಣೆಯೂ ಕಂಡುಬರುತ್ತವೆ. ಕಾರಣ ಗೌರಿಯು

ನಗರೀಕರಣದಲ್ಲಿ ಜೀವನ ನಡೆಸುತ್ತಿರುವುದು ಪ್ರಮುಖ ಕಾರಣವಾಗಿರುತ್ತದೆ. ಒಬ್ಬಂಟಿಯಾಗಿ ಜೀವನ ನಡೆಸಿ ಸಾಧನೇ ಮಾಡುವುದೇ ಗೌರಿಯ ಪ್ರಮುಖ ಗುರಿಯಾಗಿರುತ್ತದೆ.

ಗೌರಿಯವರಿಗೆ ತನ್ನ ಸ್ನೇಹಿತಳಾಗಿದ್ದ ಲಕ್ಷ್ಮೀಯ ಭೇಟಿಯಾಗುತ್ತದೆ. ಸಂಸಾರದ ಬಗ್ಗೆ ಪ್ರಸ್ತಾಪ ನಡೆಯುತ್ತದೆ ಲಕ್ಷ್ಮೀ ಮದುವೆಯ ನಂತರ ತನ್ನ ಗಂಡನ ಇಚ್ಛೆಗೆ ತಕ್ಕಂತೆ ಬದಲಾವಣೆ ಹೊಂದಿರುತ್ತಾಳೆ. ಆ ರೀತಿಯ ಜೀವನವನ್ನು ನಡೆಸುವಂತಹದು ಗೌರಿಗೆ ಅಭ್ಯಾಸ ಇರುವುದಿಲ್ಲ. ಅವೆಲ್ಲವನ್ನು ತೊರೆದು ಏಕಾಂಗಿಯಾಗಿ ಸ್ವತಂತ್ರ್ಯವಾದ ಜೀವನ ನಡೆಸುವುದೇ ಆಕೆಯ ಪ್ರಮುಖ ಧ್ಯೇಯವಾಗಿರುತ್ತದೆ. ಗೌರಿಯು ಮನೆಯಲ್ಲಿ ಮೊದಲ ಮಗಳಾಗಿದ್ದರಿಂದ ಅಪರೂಪದ ಬೆಳವಣಿಗೆಯನ್ನು ಪಡೆದಿರುತ್ತಾಳೆ. ಮನೆಯಲ್ಲಿ ಒಂದು ಕ್ರಮಬದ್ಧತೆಯ ವಾತಾವರಣವಿರುತ್ತದೆ. ಅದನ್ನು ಮೀರಿ ನಡೆಯುವುದೇ ಗೌರಿಯ ಗುರಿಯಾಗಿರುತ್ತದೆ. ತನ್ನ ತಂಗಿಯ ಬದುಕಿನ ಚೌಕಟ್ಟನ್ನು ತರುತ್ತಾಳೆ ಅವರು ಇಂಗ್ಲೆಂಡಿನಲ್ಲಿ ನೆಲೆಸಿರುತ್ತಾರೆ. ಅಲ್ಲಿಂದ ಹಿಂದುರುಗಿಬಂದಾಗ ಕ್ರಾಕರಿ ಮಿಕ್ಸರ್, ಮ್ಯೂಸಿಕ್ ಸಿಸ್ಟಮ್, ಸ್ವೆಟರ್‌ಗಳು ತಂದಿರುತ್ತಾರೆ. ಅವೆಲ್ಲವನ್ನು ತನ್ನ ತಾಯಿಗೆ ಪತ್ರದ ಮೂಲಕ ವಿವರಿಸುತ್ತಾರೆ. ಈ ರೀತಿಯ ಪರಿಸರಕ್ಕೆ ಗೌರಿಯು ಒಲವು ತೋರಿಸುವುದಿಲ್ಲ. ಪಾಪ ಮತ್ತು ಗೌರಿಯ ಬಾಲ್ಯದ ದಿನಗಳು ಒಬ್ಬರಲ್ಲಿಲ್ಲೊಬ್ಬರು ದ್ವೇಷ ಅಸೂಹೆಗಳಿಂದ ಕೂಡಿರುತ್ತದೆ. ಪಾಪನ್ನು ಕಂಡರೆ ಗೌರಿಗೆ ಆಗಿಬರೋದಿಲ್ಲ ಗೌರಿ "ಅಪ್ಪ ನಾನು ಪಾಪನ್ನ ಹಿಡ್ಕಂಡೆ ಬೀಳಿಸಲಿಲ್ಲ" ಎಂಬ ಪ್ರೀತಿಯ ಮಾತುಗಳನ್ನು ತಂದೆ-ತಾಯಿಯರಿಗೆ ತಿಳಿಸುತ್ತಾಳೆ.

ವಿಕೃತ ಮನದ ಚಿತ್ರಣವೂ ಕಂಡುಬರುತ್ತದೆ. ಪಕ್ಕದ ಮನೆಯ ಪೂನಂ ತವರಿಗೆ ಹೋದಾಗ ಗಂಡ ಶಾಂ ಗೌರಿಯಲ್ಲಿ ಸ್ನೇಹವನ್ನು ಬೆಳೆಸಲು ಪ್ರಯತ್ನಿಸುತ್ತಾನೆ ಅಲ್ಲದೇ ಆಕೆಯನ್ನು ಪಡೆಯಲು ಪ್ರಯತ್ನಿಸುತ್ತಾನೆ. ನಗರೀಕರಣದಲ್ಲಿ ಈ ರೀತಿಯ ಚಿತ್ರಣವು ಕಂಡುಬರುತ್ತದೆ ಯಾವುದೇ ಹೆಂಡತಿಯಿದ್ದರೂ ಅನೇಕ ಸಲ ಮಹಿಳೆಯ ಮೇಲೆ ನಡೆಯುವ ಹತ್ಯಾಚಾರ ಕಂಡುಬರುತ್ತದೆ. ಇವೆಲ್ಲವನ್ನು ಎದುರಿಸುವ ಶಕ್ತಿಯನ್ನು ಹೊಂದಿದ್ದರೂ ಕೆಲವೊಂದು ಅಸಹಾಕತೆಯು ಕಂಡುಬರುತ್ತದೆ. ಶ್ಯಾಂನ್ನು ಗೊಂದಲದಿಂದ ಬಿಡುಗಡೆಗೊಂಡು ತನ್ನ ಕೆಲಸಕ್ಕೆ ಹೊರಡಲು ನಿಂತಿರುತ್ತಾಳೆ. ಅನೇಕ ಸಲ ಈ ರೀತಿಯ ತೊಂದರೆಗಳು ಗೌರಿಯ ಮೇಲೆ ಪ್ರಭಾವ ಬೀರುತ್ತವೆ.

ಮಕ್ಕಳ ಬೆಳವಣಿಗೆಗೆ ಒಳ್ಳೆಯ ಪರಿಸರ ಅವಶ್ಯಕ ಎಂಬುದು ತಿಳಿಯುತ್ತದೆ. ತಾಯಿಯು ಬೆಳೆಸುತ್ತಿರುವ ಸಂಬಂಧವನ್ನು ಕುರಿತು ಹೆಚ್ಚಿನ ರೀತಿಯಲ್ಲಿ 'ಡಿಸ್ ಅಪಾಯಂಟ್' ಆಗುತ್ತಾನೆ. ಚಿಂಬುಗಿ ಹೊಸ ರೀತಿಯ ಪರಿಸರವನ್ನು ಸೃಷ್ಟಿಕೊಳ್ಳುತ್ತಾ ಇತ್ತೀಚಿನ ದಿನಗಳಲ್ಲಿ ತಾಯಿ ಮಕ್ಕಳ ಸಂಬಂಧದಲ್ಲಿಯೂ ಅನೇಕ ರೀತಿಯ ವ್ಯತ್ಯಾಸವನ್ನು ನೋಡಬಹುದು. ಮತ್ತೊಂದು ಸಲ ಶ್ಯಾಂ ಯಾವುದೊಂದು ನೆಪದ ಮೇಲೆ ಆಕೆಯನ್ನು ಪಡೆಯಲು ಮುಂದಾಗುತ್ತಾನೆ ಆಗ... ರಕ್ಷಣೆಗೆ

ಒಳಗಾಗುತ್ತಾಳೆ. ಹಾಗೆಯೇ ಕನ್ನಯ್ಯನ ಹಿಂಸೆಗೂ ಗೌರಿಯು ಒಳಗಾಗುತ್ತಾಳೆ ಕನ್ನಯ್ಯ ಗೌರಿಯನ್ನು ನಿನಗೆ ವಿಚಿತ್ರ ಸುದ್ದಿಯನ್ನು ತೋರಿಸುತ್ತೇನೆಂದು ರೂಂ ಒಳಗೆ ಕರೆದೊಯ್ದು ಮಗು ಹುಟ್ಟುವುದು ಯಾವ ರೀತಿ ನಿನಗೆ ಗೊತ್ತಾ ನಾನು ತೋರಿಸುತ್ತೇನೆ ಆಕೆಯ ಮೇಲೆ ಪ್ರಯೋಗವನ್ನು ಮಾಡಲು ಹೋದಾಗ ಆ ತೊಂದರಿಯಿಂದ ವೆಂಕಮ್ಮ ಕಾಪಾಡುತ್ತಾಳೆ. ನಗರೀಕರಣದಲ್ಲಿ ಒಬ್ಬಂಟಿಯಾಗಿ ಜೀವನ ಆರಂಭಿಸಿದಾಗ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ಅನಿರುದ್ಧ ಸಿಕ್ಕ ಮೇಲೆಯೂ ಗೌರಿಯು ಸ್ಥಗಿತಳಾಗಿರುವುದಿಲ್ಲ. ಅವಳ ತಲ್ಲಣಗಳು ಮಾರುಹೋಗುವ ತುಡಿತಗಳು ಕಡಿಮೆಯಾಗುವುದಿಲ್ಲ "ಎಲಿಫಿಂಟ್ ಎಷ್ಟು ಚೆನ್ನಾಗಿದೆ ಅಲ್ಲಿಂದ ಯೂ ವಿಲ್ ಗೆಟ್ ಎ ಡಿಫರೆಂಟ್ ಪರ್‌ಕ್ಷಿಪ್ ಆಫ ಎವ್ರಿಥಿಂಗ್" ಎಂದು ಬೇಗ ಬೇಗ ತಯಾರಾಗುತ್ತಾಳೆ. ಅನರುದ್ಧ ಪ್ರೀತಿಯಿಂದ ಇದ್ದರೂ ಏನೋ ಭಯ, ಅಪ್ಪ ಅಮ್ಮನ ಬಗ್ಗೆ ತನಗೆ ಗೊತ್ತಿಲ್ಲವೆಂದು, ಆಂಟಿಯ ಹತ್ತಿರ ಬೆಳೆದವನೆಂದು ಮನೆ ಅಡ್ರಸ್ ಕೊಡಲಿಲ್ಲವೆಂದು ತಾನು ಹೀಗೆ ಕಳವಳ ಪಡುತ್ತಿದ್ದೇನೆಯೆ? ಇದು ಅಭದ್ರತೆಯ ಭಯವೇನು? ಹೀಗೆಲ್ಲ ಕೇಳಿಕೊಳ್ಳುತ್ತಿದ್ದರೂ ಸತೀಶನೆಂಬ ಉತ್ತಮ ವರನೊಂದಿಗೆ ಏಳುವ ಬಗೆಯ ಪ್ರಶ್ನೆಗಳನ್ನು ಅನಿರುದ್ಧನೆದುರು ಹೇಳಲಾಗುವುದಿಲ್ಲ. ಗೌರಿಗೆ ಹೀಗೆ ಅನೇಕ ರೀತಿಯಲ್ಲಿ ತನ್ನ ಮನಸ್ಸಿನಲ್ಲಿ ಕಲರವ ಉಂಟಾಗುತ್ತದೆ.

ಅಭಿಮಾನ, ಕೋಮಲತೆ, ಆಧುನಿಕ ಪ್ರಜ್ಞೆ ಎಲ್ಲದರ ಸಂಗಮದಂತಿರುವ ಗೌರಿ ತಾನು ಇಷ್ಟಪಟ್ಟು ಅನಿರುದ್ಧನೊಂದಿಗೆ ಯಾವ ಅಳುಕಿಲ್ಲದೆ, ಭಯವಿಲ್ಲದೆ ಮನಃಪೂರ್ವಕವಾಗಿ ಬೆರೆಯುತ್ತಾಳೆ ಗೌರಿ 'ಗೇಟ್ ವೇ ಆಫ್ ಇಂಡಿಯಾ' ಸೇರಿದಾಗ ಅಲ್ಲಿ ಹೊಸ ರೀತಿಯ ಪರಿಚಯ ಸಿಗುತ್ತೆ ಬಲೂನ್, ಪೀಪಿ, ಐಸ್‌ಕ್ರೀಮ್, ಸೌತೆಕಾಯಿ, ಪಾಪ್‌ರಾನು ಮಾರುವವರು ಹಲವಾರು ಕೆಲ ರೀತಿಯ ವ್ಯಾಪರಸ್ಥರು ಕಂಡುಬರುತ್ತಾರೆ. ಎಲಿಫೆಂಟನಿಂದ ಕ್ಯಾನಿನ್ ತಲುಪುತ್ತಾಳೆ. ಅಲ್ಲಿನ ಪರಿಸರ ಆ ಸೊಬಗು ಅವುಗಳಲ್ಲಿ ಅಪ್ಪ, ಅಮ್ಮ,ಪಾಪ, ಬೆಂಚು, ಅನಿರುದ್ಧ, ಪೂನಂ ಎಲ್ಲರೂ ಮರೆತು ತನ್ನನ್ನೇ ತಾನು ಮರೆಯುತ್ತಾಳೆ. ಇಟಾಲಿಯನ್‌ರವರ ಪರಿಚಯವಾಗುತ್ತದೆ. ಪ್ರೇಮಿಗಳು ಒಬ್ಬರಲ್ಲಿ ಒಬ್ಬರು ತಲ್ಲೀನವಾಗಿರುವ ದೃಶ್ಯವನ್ನು ಕಾಣಬಹುದು.

"ನೀನೇಕೆ ಎಲ್ಲರಂತಿರಬಾರದು?"[೬] ಮನೆಗೆ ಬಂದ ತಕ್ಷಣ ಕೈಗೆ ಸಿಕ್ಕ ಅಮ್ಮನ ಈ ಪತ್ರದಲ್ಲೂ ಅದೇ ಪ್ರಶ್ನೆ ಎಲ್ಲರಂತೆ ತನ್ನ ಗೊಂದಲದಲ್ಲಿರುತ್ತದೆ. ಗೌರಿಯ ಸ್ನೇಹಿತಳಾಗಿದ್ದ ಲಕ್ಷ್ಮೀ ಮದುವೆಯಾಗಿ ಎರಡು ಮಕ್ಕಳನ್ನು ಹೆತ್ತು ಗಂಡ ಮತ್ತು ಮಕ್ಕಳ ಬೆಳವಣಿಗೆಯಲ್ಲಿ ತನ್ನ ಸಮಯವನ್ನು ಕಳೆದಿರುತ್ತಾಳೆ. ನಾನೇಕೆ ಅವಳಂತಿರಬಾರದು? ಎಂಬ ಪ್ರಶ್ನೆಗಳು ಉದ್ಭವವಾಗುತ್ತದೆ. ನಂತರ ಪ್ರಯಾಣವನ್ನು ಆರಂಭಿಸುತ್ತಾರೆ. ಅದರಲ್ಲಿ "ಬೇಡಮ್ಮ ಮದುವೆಯಾಗದ ಹುಡುಗಿ ಹಾಗೆ ಒಬ್ಬಳೇ ಓಡಾಡೋದು ಬೇಡ, ಆ ಮೇಲೆ ಎಷ್ಟು ಬೇಕಾದರು ನಿನ್ನ ಗಂಡನ ಜೊತೆ ತಿರುಗುವಂತೆ

ಈಗ ಬೇಕಾದರೆ ಫ್ರೆಂಡ್ಸ್ ಜೊತೆಹೋಗು"[೫] ಎಂಬ ಮಾತುಗಳು ಬರುತ್ತವೆ. ಎಲ್ಲರೂ ತಮ್ಮತಮ್ಮವರ ಜೊತೆ ಹೊರಟಾಗ ತಾನು ಏಕಾಂಗಿಯಾಗಿರುವುದು ಆಗ ಮನವರಿಕೆಯಾಗುತ್ತದೆ. 'ಫ್ಯಾಮಿಲಿ ಇಸ್ ಫ್ಯಾಮಿಲಿ' ಎಂಬುದು.

ಪ್ರವಾಸವನ್ನು ಮುಗಿಸಿ ಮನೆಗೆ ತಲುಪಿದ ಬೆಳಿಗ್ಗೆ ೮ ಗಂಟೆಗೆ ಕರೆಗಂಟೆ ಬಾಗಿಲು ತೆಗೆದಾಗ ಲತಾ ಚಿಂಚೂನ ಆಗಮನವಾಯಿತು. ಲತಾ, ಗೌರಿಯಲ್ಲಿ ನಿಮಗೆ ಏನು ತೊಂದರೆ ಆಗದಿದ್ದರೆ ಇವತ್ತು ಚಿಂಚೂನನ್ನು ನಿಮ್ಮ ಜೊತೆ ಇರಿಸಕೊಳ್ಳಿ, ನನಗೆ ಸಣ್ಣ ಪ್ರಾಬ್ಲಮ್ ಆಗಿದೆ, ಆಫೀಸಿನವರುಕೆಲಸ ಮನೆಯಲ್ಲಿ ಡಿಸ್‌ಕರ್ಷನ್‌ಗೋಸ್ಕರ ಮನೆಗೆ ಬರುತ್ತಿದ್ದಾರೆ. ಈ ನಡುವೆ ಚಿಂಚೂನ ಬಿಹೆವಿಯರ್ಸ್ ಸರಿ ಇರುವುದಿಲ್ಲ. ಹಾಗಾಗಿ ಚಿಂಚೂನ ನಿಮ್ಮ ಮನೆಯಲ್ಲಿ ಇಟ್ಟುಕೊಳ್ಳಿ ಎಂದು ಹೇಳುತ್ತಾಳೆ. ಸರಿ ನೀವು ಬರುವವರಿಗೂ ಚಿಂಚೂ ಇಲ್ಲೇ ಇರುತ್ತಾನೆ ಎಂಬುದಾಗಿ ತಿಳಿಸುತ್ತಾಳೆ.

ಎಲಿಫೆಂಟಾ ಮೆಟ್ಟಿಲುಗಳನ್ನು ಹತ್ತಿ ಹೋದಂತೆ ಮರಗಳ ತೋಪು, ಸರೋವರ ಎಲ್ಲಾ ತನ್ನ ಕನಸಿನಲ್ಲಿ ಬರತೊಡಗುತ್ತೆ ತನ್ನನ್ನು ಅಪ್ಪಿಕೊಂಡ ಹಾಗೇ ಬೆಚ್ಚಿಬೀಳುತ್ತಾಳೆ. ಎದೆಬಡಿತ ಜೋರಾಗುತ್ತದೆ. ನನ್ನನ್ನು ತುಂಬಾ ಪ್ರೀತಿಸುವ ಅನಿ ಎಂಬುದು ಕನಸಿನಲ್ಲಿ ಬರುತ್ತೆ ಆಗ ಮಾರನೇಯ ದಿನವೇ ಜಹಾಂಗೀರ್‌ಗೆ ಹೋಗಲು ಸಿದ್ದಳಾಗುತ್ತಾಳೆ. ಅಲ್ಲಿ ಅನಿರುದ್ಧನ ಹುಡುಕಾಟದಲ್ಲಿ ತೊಡಗಿದ್ದಾಗ ಎಲ್ಲಾ ರೀತಿಯ ಕಲಾಪ್ರದರ್ಶನಗಳು ಕಂಡುಬರುತ್ತವೆ. ೨೨-೨೩ ವರ್ಷದ ಹಳೆಯ ಜೀನ್ಸ್ ಬಿಳಿ ಟೀ ಶರಟು ಧರಿಸಿದ ನೀವು ಅನಿರುದ್ಧನಿಗಾಗಿ ಕಾಯುತ್ತಿದ್ದೀರಾ! 'ಯು ಆರ್ ಫ್ರೆಂಡ್ಸ್' ಎಂಬುದಾಗಿ ಕೇಳುತ್ತಾಳೆ. ಇದು ಗೌರಿಯಲ್ಲಿ ಪ್ರಶ್ನಾತ್ಮಕವಾಗಿ ನಿಲ್ಲುತ್ತದೆ. ಅನಿರುದ್ಧನು ಅಂದು ಜಹಾಂಗೀರ್ ಆರ್ಟ್ ಗ್ಯಾಲರಿಯನ್ನು ತಲುಪುತ್ತಿದ್ದಂತೆಯೇ ಮೆಟ್ಟಿಲ ಮೇಲೆ ಜಹಾಂಗೀರ್ ಪ್ರತ್ಯೇಕ್ಷನಾಗುತ್ತಾನೆ. ಅವನಲ್ಲಿ ಚರ್ಚೆ ನಡೆಸಿದಾಗ "ಹಂ ಹೈ ಗಿವ್ ಆಪ್' ಗೊತ್ತಾಗ್ಲಿಲ್ಲ ಎಷ್ಟೋ ಸಲ ಯಾವಾಗಲೋ ನನ್ನ ಎಗ್ಜಿಮಿಶನ್ ನೋಡಿದವರು ಬರ್ತಿದ್ದಾರೆ ಮೀಟ್ ಮಾಡೋಕೆ. ಮಸ್ಟ್ ಬಿ ಒನ್ ಆಫ್ ಮೈಕ್ರೀಟಿ ಫ್ಯನ್ಸ್"[೬] ಎಂಬುದಾಗಿ ತಿಳಿಸುತ್ತಾನೆ. ಸಣ್ಣ ಸಮಸ್ಯೆಯಾಗಿದೆ. ಎಂಬ ಮಾತನ್ನು ತಿಳಿಸುತ್ತಾನೆ. ಪೋನ್‌ನಂಬರ್ ಕೇಳಿದಾಗ ಗಲ್ಲಿ ಹುಡುಕಾಡುವುದು ತುಂಬಾ ಕಷ್ಟದ ಕೆಲಸ ಎಂಬುದಾಗಿ ಹೇಳುತ್ತಾನೆ.

ಟ್ಯೂಶನ್ನಿಗೆ ಬರುವ ರೀಮಾ ಸೀಮಾ ಟ್ಯೂಶನ್ ಬಾಡಿಗೆಯನ್ನು ತಂದಿರುತ್ತಾರೆ ಅಲ್ಲೇ ಟ್ಯೂಶನ್ ನಡೆಸುವುದರಲ್ಲಿಯೂ ದೊಡ್ಡ ಬಿಸಿನಸ್ ಆಗಿರುತ್ತದೆ. ಗೌರಿ ಅವಶ್ಯಕತೆ ಇಲ್ಲದಿದ್ದರೂ ಅದನ್ನು ಪಡೆಯಬೇಕಾಗಿರುತ್ತದೆ. ತಂದೆ ಮಕ್ಕಳಿಗೆ ಯಾವುದೇ ರೀತಿಯ ತೊಂದರೆಯಿಲ್ಲದಂತೆ ತಮ್ಮ ಮಗಳಿಗೆ ಮನೆಯನ್ನು ಕೊಡಸಿರುತ್ತಾನೆ. ಜೊತೆಗೆ ಎಡ್ವವೈಟೈಜಿಂಗ್‌ನಲ್ಲಿ ಸಂಪಾದನೆಯನ್ನು ಹೊಂದಿರುತ್ತಾಳೆ. ಕೆಲವು ಬಾಲ್ಯದ ನೆನಪುಗಳು ಬರುತ್ತವೆ. ಗೌರಿಯ ತಂದೆಯನ್ನು ಕೇಳಿದಾಗ

ಲಾಯರ್ ಎಂಬುದಾಗಿ ಹೇಳಿರುತ್ತಾರೆ. ಲಾಯರ್‌ನಿಲ್ಲಾ ಸುಳ್ಳು ಹೇಳಿರುತ್ತಾರೆ ಎಂಬ ವಿಷಯ ತಿಳಿಸಿದಾಗ ಸಂಜೆಯ ಸಮಯದಲ್ಲಿ ಮನೆಯಲ್ಲಿ ಆಫೀಸ್‌ನ್ನು ನಿರ್ಮಿಸಿಕೊಂಡಿರುತ್ತಾರೆ ಅಲ್ಲಿ ಒಂದು ಚರ್ಚೆ ನಡೆಯುತ್ತಿರುತ್ತದೆ. ಅಪ್ಪ ಹದಿನೇಳು ಹದಿನೆಂಟು ವರ್ಷದ ಹುಡುಗನಿಗೆ ಹೇಳುತ್ತಿರುತ್ತಾನೆ. ಪರಸ್ಪರ ಮಾವಿನ ತೋಪು ಎಲ್ಲಿದೆಯೋ ಎಂದು ಕೇಳಿದಾಗ ನಂಗೊತ್ತಿಲ್ಲ ಎಂಬ ಉತ್ತರವನ್ನು ಕೊಡು ಎಂಬುದಾಗಿ ಹೇಳಿಕೊಡುತ್ತಿರುತ್ತಾರೆ ಈ ರೀತಿಯ ನೆನಪುಗಳು ಬರುತ್ತವೆ.

ಲತಾ ಪ್ರತ್ಯೇಕವಾಗಿ ಇರುತ್ತಾಳೆ ಚಿಂಚೂನ ಮಿಸ್ ಬಿಹೇವಿಯರ್ಸ್ ಹೆಚ್ಚಾಗಿದೆ ನನ್ನ ಪರಿಚಿತರು ಮನೆಗೆ ಬಂದಾಗ ಅವರಿಗೆ ಸ್ಪಂದಿಸುವುದಿಲ್ಲ. ಏಳು ವರ್ಷವಾದರೂ ಸ್ವಲ್ಪವೂ ಅರ್ಥಮಾಡಿಕೊಳ್ಳುವ ಪರಿಸ್ಥಿತಿಯಲ್ಲಿರುವುದಿಲ್ಲ ಗಲಾಟೆ ಹೆಚ್ಚಾಗಿರುತ್ತದೆ ಎಂಬುದನ್ನು ತಿಳಿಸಿ ನಾನು ನಿಮಗೆ ತೊಂದರೆ ಕೊಟ್ಟೆನೇನು ಎಂಬ ಮಾತು ತಿಳಿಸಿ ಹೊರಡುತ್ತಾಳೆ. ಚಿಂಚೂ ಗೌರಿಯ ಬಳಿಯಲ್ಲಿ ಉಳಿದಾಗ ಯಾರೋ ಮನೆಗೆ ಬಂದಿದ್ದರೂ ಎಂದು ವಿಚಾರಿಸಿದಾಗ ಧ್ರುವ ಅಂಕಲ್ ಎಂಬ ವಿಚಾರವನ್ನು ಹೇಳುತ್ತಾಳೆ ಧ್ರುವ ಮತ್ತು ಲತಾ ನಡುವೆ ಪ್ರೇಮವಿರುತ್ತದೆ. ಅದಕ್ಕೆ ಅಡ್ಡಿಯಾಗಿರುವುದೇ ಚಿಂಚೂನೇ ಮೂಲ ಕಾರಣವಾಗಿರುತ್ತದೆ. ಅವರಿಂದ ದೂರ ಮಾಡುವುದೇ ಧ್ರುವನ ಧ್ಯೇಯವಾಗಿರುತ್ತದೆ ಯಾವುದೇ ರೀತಿಯಲ್ಲಿ ಅವರ ಪ್ರೀತಿ ಪ್ರೇಮಳಿಗೆ ತೊಂದರೆಯಾಗದೇರುವುದೇ ಇದಕ್ಕೆ ಕಾರಣವಾಗಿರುತ್ತದೆ.

ಅನಿರುದ್ಧನ ರೂಪದಲ್ಲಿ ಬಾಳಿನ ಸಂಭ್ರಮ ಆವರಿಸಿತು. ಇಬ್ಬರು ಭೇಟಿಯಾಗಿ ಸುತ್ತಾಡಲು ಹೊರಡುತ್ತಾರೆ. ಅನಿರುದ್ಧ ಗೌರಿಯ ಬಾಹ್ಯ ಸೌಂದರ್ಯಕ್ಕೆ ಮರಳಾಗಿರುತ್ತಾನೆ, ವಿನಹ ನಿಜವಾದ ಪ್ರೀತಿ-ವಿಶ್ವಾಸಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಅವಳ ಮನಸ್ಸಿಗೆ ಗೋಚರವಾಗುತ್ತವೆ ತಮ್ಮ ಮನಸ್ಸಿನ ಇಚ್ಛೆಗಳಲ್ಲಿ ನಾನು ನಿಮ್ಮ ಜೊತೆ ಫ್ರೇಂಡ್ಲಿಯಾಗಿರುವಂತೆ ಯಾರೊಡನೆಯೂ ಇರುವುದಿಲ್ಲ. "ನಮ್ಮ ಗಳೆತನದಲ್ಲಿ ನೀವು ಹೆಣ್ಣೆಂಬ ತೆರೆಯೂ ಅಡ್ಡ ಬರುವುದಿಲ್ಲ ಹೌದು, ನಿಮ್ಮ ಜೊತೆ ಏನುಬೇಕಾದರೂ ಹರಟಬಹುದು ಅನ್ನಿಸುತ್ತೆ ನಿಮಗೆ ಎಡಬಿಡದೆ ನಾನು ಹೆಣ್ಣೆಂಬ ಅವೇರ್‌ನೆಸ್ ಇರುವುದಿಲ್ಲ. ಎ ಲೈಕ್ ಇಟ್ ಡೊಂಟ್ ಲೈಕ್ ಫೇಮಿನೈಸ್ ನಖರಾಸ್"[೭] ಗೌರಿಗೆ ಬದುಕಿನ ಕಲೆಯನ್ನು ಹೇಳುತ್ತಾನೆ. ಸಂಗೀತ ಸವಿಯಲು ಪ್ರೋತ್ಸಾಹ ಮಾಡುತ್ತಾನೆ. ಅವಳಿಗಾಗಿ ಒಂದು ರೇಖಾಚಿತ್ರವನ್ನು ಬರೆದಿರುತ್ತಾನೆ. ಅದ್ಯಾಕೆ ಗೊಜ್ಜು ಮಾಡಿದ್ದೀರಿ ಎಂದು ಕೇಳುತ್ತಾನೆ. ಆಗ ಮನೆಗೆ ಹೊರಡಲು ಸಿದ್ಧನಾಗುತ್ತಾನೆ. ಮನೆಯಲ್ಲಿ ಹೆಂಡ್ತಿ ಇರುವ ಹಾಗೇ ಮಾಡ್ತಿರಲ್ಲ ಎಂದು ವಿಷಯ ಕೇಳಿದಾಗ ಮಗಳ ಹುಟ್ಟಿದಹಬ್ಬ ಇದೆ ಅದಕ್ಕೆ ಹೊರಟಿದ್ದೇನೆ ಎಂದಾಗ ತನ್ನ ಮನಸ್ಸಿನಲ್ಲಿ ಅವನಿಗೆ ಹೆಂಡತಿ ಇದ್ದಾಳಾ, ಮಕ್ಕಳು ಇದಾವಾ ಎಂಬ ಪ್ರಶ್ನೆಗಳು ಕಾಡುತ್ತಿರುತ್ತವೆ.

ಶಾಂತಾರಾಮ ಅಮ್ಮನ ತಮ್ಮನಾಗಿರುತ್ತಾನೆ. ಆತನನ್ನು ಮದುವೆಯಾಗಿದ್ದರೆ ಜೀವನದಲ್ಲಿ ಈ ಗೊಂದಲಗಳಿಗೆ ಅವಕಾಶವಿರುತ್ತಿರಲಿಲ್ಲ. ಮುಂಬೈಗೆ ಬರುತ್ತಿರಲಿಲ್ಲ ಚಿಂಚುವಿನೊಡನೆ ಪ್ರೇಮ್

ಸ್ಪೋರ್ಟ್ಸ್ ನೋಡುತ್ತಿರಲಿಲ್ಲ ಶ್ಯಾಂ ಕಣ್ಣಿಗೆ ಬೀಳುತ್ತಿರಲಿಲ್ಲ. ಪ್ರತಿವಾರ ಜಹಾಂಗೀರಗೆ ಹೋಗಿ ವ್ಯಾನಿಲಾ ಐಸ್‌ಕ್ರೀಂ, ಚಾಕೋಲೇಟ್, ಸಾಸ್ ತಿಂದು ಪ್ರದರ್ಶನಗಳನ್ನು ನೋಡಿ ಬರುತ್ತಿರಲಿಲ್ಲ. ಪ್ರತಿ ಕಾಗದದಲ್ಲಿ ಪಾಪ ಮದುವೆಯಾಗದ ಹೆಂಗಸರಿಗೆ ಲೈಫ್ ಬೋರ್ ಎಂದು ಬರೆಯುತ್ತಿರಲಿಲ್ಲ. ನೀನೇಕೆ ಎಲ್ಲರಂತಿಬಾರದು ಎಂದು ಯಾರೂ ಹಂಗಿಸುತ್ತಿರಲಿಲ್ಲ. ಅಪ್ಪನ ಕಣ್ಣುಗಳಲ್ಲಿ ಹತಾಶೆ ಇಣುಕುತ್ತಿರಲಿಲ್ಲ.

ಶಾಂತರಾಮರಿಗೆ ಗೌರಿಯನ್ನು ಕೊಟ್ಟು ಮದುವೆ ಮಾಡಲು ತಾಯಿಯ ಇಚ್ಛೆಯಾಗಿರುತ್ತದೆ. ಗೌರಿಯು ಬೇಡವೆಂದಾಗ ಕೈತುಂಬಾ ಸಂಬಳ, ಒಳ್ಳೆಯ ಕೆಲಸ, ಕಾರು, ಮನೆ ನಮ್ಮ ಪ್ರೇಂ ಅಧೃಷ್ಟ ಎಂಬುದಾಗಿ ತಾಯಿಯ ಪ್ರೇಂನ್ನು ಲಗ್ನ ಯಾವಾಗ ಇಡಿಸೋಣ ಎಂದಾಗ ಮದುವೆ ಬೇಡ ಆತನನ್ನು ಮದುವೆಯಾಗುವುದಿಲ್ಲ ಎಂದು ತಿಳಿಸಿದಾಗ ತಾಯಿ ತಾನೆ ಜಾಗೀರುದಾರರ ಹುಡುಗಿಯನ್ನು ತಂದು ಮದುವೆ ಮಾಡುತ್ತಾಳ. ಎಲ್ಲವನ್ನು ತೊರೆದು ಮುಂಬೈಗೆ ಹೊರಡಲು ಸಿದ್ದರಾಗಿರುತ್ತಾಳೆ ಟ್ರೈನ್‌ನಲ್ಲಿ ಸೆಕೆಂಡ್ ಕ್ಲಾಸ್ ರೈಲ್ವೆ ಪಾಸು ಮಾಡಿಸುವುದಾಗಿ ನಿರ್ಧರಿಸುತ್ತಾಳೆ. ಅಲ್ಲಿ ಕಂಡುಬರುವ ದೃಶ್ಯಗಳು ಮೀನಿನ ವಾಸನೆ, ಹಸಿವಿನಿಂದ ಕಿರಿಚುತ್ತಿದ್ದ ಮಗು ಟ್ರೈನ್ ತುಂಬಾ ಬಿಂದಿ ಮಾರುವವರು ಭಿಕ್ಷೆ ಬೇಡುವವರು ಈ ರೀತಿಯ ಎಲ್ಲಾ ಚಿತ್ರಣವು ಕಂಡುಬರುತ್ತವೆ. ಈ ಎಲ್ಲಾ ದಾರಿಗಳು ಮನುಷ್ಯ ಬದುಕಲು ಸಹಾಯವಾಗುವ ಒಳದಾರಿಗಳಾಗಿರುತ್ತವೆ. ಅವುಲ್ಲವುಗಳಲ್ಲದೇ ಉಪ್ಪು- ಖಾರ ಹಾಕಿದ ಸೀಬೇಕಾಯಿ, ಬೇಲ್‌ಪುರಿ, ಹೇರ್‌ಪಿನ್-ಕ್ಲಿಪ್ ಮಕ್ಕಳ ನಿಪ್ಪಲ್ ಹೀಗೆ ಅನೇಕ ರೀತಿಯ ಚಿತ್ರಣಗಳು ಕಂಡುಬರುತ್ತವೆ.

ಪ್ರತಿದಿನ ಒಂದೇ ರೀತಿಯಲ್ಲಿಯೇ ಇರುತ್ತದೆ ಮುಂಬೈಗೆ ಬಂದಾಗಲಿಂದಲೂ ತಾನೂ ಮೈಸೂರಿಗೆ ಹೋಗಿರುವುದಿಲ್ಲ. ತಂದೆ-ತಾಯಿಯನ್ನು ನೋಡಲು ಬಯಸಿದಾಗ ತಾಯಿಯು ಮಾಡಿದ ಹಾರೈಕೆ ನೆನೆಪಿಗೆ ಬರುತ್ತದೆ. ಅದನ್ನು ಮರೆಯಲು ಸಾಧ್ಯವಾಗಿರುವುದಿಲ್ಲ ಶ್ರೀಮಂತ ತನವನ್ನು ಪಡೆದುಕೊಂಡಾಗ ಅಲ್ಲಿ ಸ್ನೇಹತ್ವವನ್ನು ಪಡೆಯಲು ಸಾಧ್ಯವಿರುವುದಿಲ್ಲ ಅಡ್ವಟೈಜಿಂಗ್‌ನಲ್ಲಿ ಪ್ರತಿಯೊಂದು ಕೆಲಸದಲ್ಲಿಯೂ ಹಣ ಗಳಿಸಲು ಹೆಚ್ಚಿನ ಅವಕಾಶವಿರುತ್ತದೆ ತನ್ನ ಜೊತೆ ಅತೀ ಸ್ನೇಹದಿಂದ ಬೆರೆತೂ ಕೆಲಸ ಬಿಟ್ಟ ನಂತರ ಅವರ ಸಂಪರ್ಕವು ಕಡಿಮೆಯಿರುತ್ತದೆ. ಶಶಿಧರ ಎನ್ನುವ ತನ್ನ ಗೆಳೆಯ ತನ್ನ ಕೆಲಸದ ಮೇಲೆ ತುಂಬಾ ಅಭಿಮಾನವನ್ನು ಹೊಂದಿರುತ್ತಿದ್ದ. ಆತ ಬೇರೊಂದು ಕಡೆ ಹೋದಾಗ ತನ್ನ ಫೈನಾನ್ಸ್ ಕೆಲಸವಿದ್ದಾಗ ಮಾತ್ರ ಸಂಪರ್ಕವನ್ನು ಪಡೆಯುತ್ತಿದ್ದ ಜನ ತನ್ನ ಅವಶ್ಯಕತೆಗಳಿಗೆ ಮಾತ್ರ ಜನರ ಸಂಬಂಧವನ್ನು ಬಳಸುತ್ತಿದ್ದರೂ ವಿನಹ ಆತ್ಮೀಯತೆಯೂ ಕಂಡುಬರುತ್ತಿರಲಿಲ್ಲ

ರೈಲು ನಿಲ್ದಾಣದಲ್ಲಿ ನಿಂತಾಗ ಜನರ ನಾನಾ ರೀತಿಯ ಜೀವನವೂ ಕಂಡುಬರುತ್ತದೆ. ಪ್ಲಾಟ್‌ಫಾರ್ಮ್‌ನಲ್ಲಿ ಅನೇಕ ರೀತಿಯಲ್ಲಿ ಹಳಿಗಳ ಮೇಲೆ ಓಡಾಡುವ ರೈಲು ಸಮೀಪವಾದಂತ

ಎಚ್ಚರವಹಿಸುವುದು ಈ ರೀತಿಯು ವಾತಾವರಣವು ಕಂಡುಬರುತ್ತದೆ. ಅನಿರುದ್ಧನ ಪರಿಚಯವನ್ನು ತಿಳಿಯಲು ಮುಂದಾಗುತ್ತಾಳೆ. ತಂದೆ ತಾಯಿಯಿಲ್ಲದ ನಾನು ಆಂಟಿಯಲ್ಲಿ ಬೆಳವಣಿಗೆಯ ವಿಷಯವನ್ನು ಹೇಳುತ್ತಾನೆ. ಆಂಟಿಯು ನೆಂಟರೇ ಎಂದಾಗ ಆ ವಿಷಯವನ್ನು ಪ್ರಸ್ತಾಪಿಸಲು ಮನಸ್ಸು ಬರುವುದಿಲ್ಲ. ನನ್ನನ್ನು ಆಂಟಿಯು ನಿಮ್ಮ ಜೊತೆ ಸದಾ ಇದ್ದರಾ ಎಂದಾಗ ಅವರ ಮನಸ್ಥಿತಿಯೇ ಬೇರೆಯಾಗಿದೆ. "ಎಷ್ಟೋ ಸಂಬಂಧಗಳೊಡನೆ ನಾವು ಅಬ್ಲಿಗೇಶನ್ ಜೋಡಿಸೋಕೆ ಹೋಗುವುದರಿಂದಲೇ ಯಾವುದೋ ಒಂದು ಪಾಯಿಂಟನಲ್ಲಿ ಅದು ಹಳಿಯಾಗಿ ಬಿಡುತ್ತದೆ. ಬರೀ ಅಬ್ಲಿಗೇಶನ್ ಉಳಿದುಬಿಡುತ್ತದೆ ಎಂದು ಅಂದಿನಿಂದ ಅವರು ದಾದರ್‌ನಲ್ಲಿರುವ ತಮ್ಮ ಒಂದು ರೂಮ್-ಕಿಚನ್ ಫ್ಲಾಟಿನಲ್ಲಿ ಇದ್ದಾರೆ"[೮]

ಅವರು ಏಕಾಂಗಿಯಾಗಿದ್ದಾರೆ ೧೮ ವರ್ಷದ ಇಷ್ಟವಿಲ್ಲದ ಹುಡುಗನೊಂದಿಗೆ ಮದುವೆಯಾದ ಕೆಲವು ದಿನಗಳಲ್ಲಿ ಮರಣ ಹೊಂದುತ್ತಾರೆ. ಅವರು ಏಕಾಂಗಿಯಾಗಿ ಯಾರ ಬಳಿ ಉಳಿಯದೇ ಒಬ್ಬಂಟಿ ಜೀವನ ನಡೆಸುತ್ತಾರೆ ಎಂದಾಗ ಆಕೆಯಲ್ಲಿ ಗೌರವ ಹುಟ್ಟುತ್ತದೆ. ಅನಿರುದ್ಧ ಮತ್ತು ಆಂಟಿಯ ಸಂಬಂಧವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಗೌರಿಯಲ್ಲಿ ಆ ಸಂಬಂಧದ ಪಂಚಯ ಪ್ರಶ್ನಾತ್ಮಕವಾಗಿಯೇ ಉಳಿಯುತ್ತದೆ.

ಗೌರಿಯು ಮುಂಜಾನೆಯ ಹೊತ್ತಿಗೆ ಮೈ ಕಾಯುತ್ತಿದ್ದುದನ್ನು ನೋಡಿಕೊಂಡಾಗ ಜ್ವರ ೧೦೩ ಡಿಗ್ರಿಯಲ್ಲಿರುತ್ತದೆ. ಆಗ ಮನೆಯ ಕೆಲಸದ ರಕುಮಾ ಬಂದು ಚಹಾ ತಯಾರಿಸಿ ಬ್ಯಾಗಿನಲ್ಲಿದ್ದ ಕ್ರೋಸಿನ್ ಮಾತ್ರೆಯನ್ನು ಕೊಡುತ್ತಾಳೆ. ಇನ್ನಷ್ಟು ಹೆಚ್ಚಾದಾಗ ರಸ್ತೆಯಂಚಿನ ಅಂಗಡಿಯಿಂದ ಮತ್ತಷ್ಟು ಕ್ರೋಸಿನ್ ತರಿಸಿಕೊಳ್ಳುತ್ತಾಳೆ. ಹೆಚ್ಚಿನ ರೀತಿಯಲ್ಲಿ ಆರೋಗ್ಯ ಅಸ್ತವ್ಯಸ್ಥವಾಗುತ್ತದೆ. ಆಗ ೧೦೪ ಡಿಗ್ರಿಗೆ ಜ್ವರ ಏರಿರುತ್ತದೆ. ಅರ್ಧರಾತ್ರಿಯಲ್ಲಿ ತಾನು ಆಸ್ಪತ್ರೆಗೆ ಹೋಗಲು ಏಕಾಂಗಿಯಾಗಿರುತ್ತಾಳೆ ಆದಕಾರಣ ಚಿಂಚೂಗೂ ಸಹ ಎರಡು ದಿನ ಟ್ಯೂಶನ್‌ಗೆ ರಜೆಯನ್ನು ನೀಡಿರುತ್ತಾಳೆ.

ಗೌರಿ ಮತ್ತು ಮೈನಾವತಿ ಇಬ್ಬರು ಆಟದಲ್ಲಿ ತೊಡಗಿದ್ದಾಗ ಇದ್ದಕ್ಕಿದ್ದಂತೆ ಮೈನಾವತಿ ಮಾಯವಾಗಿರುತ್ತಾಳೆ. ದೊಡ್ಡ ಕಾಡು ಹೆಬ್ಬಾವುಗಳು ಹುಲಿ ಬಂದು ಹಿಡಿದಂತೆ ಕನಸು ಬೀರಿ ಅಪ್ಪಾ ಎಂದು ಬೆಚ್ಚಿ ಎಚ್ಚರವಾಗುತ್ತೆ. ಮುಂಜಾನೆ ಅನಿರುದ್ಧನು ಮನೆಗೆ ಬರುತ್ತಾನೆ. ಗೌರಿಯು ಆಶ್ಚರ್ಯಳಾಗುತ್ತಾಳೆ. ಜ್ವರವಿರುವ ವಿಷಯ ತಿಳಿದು ಡಾಕ್ಟರನನ್ನು ಕರೆದು ಬರುತ್ತಾನೆ. ಕಾಫಿ, ಹಣ್ಣುಗಳನ್ನೆಲ್ಲಾ ಕೊಡುತ್ತಾನೆ. ಇವರ ಸಂಬಂಧವೂ ಇನ್ನಷ್ಟು ಹತ್ತಿರವಾಗುತ್ತದೆ. ಅನಿರುದ್ಧ ಹೋದ ನಂತರ ಅವನು ಬಂದ ರೀತಿಯನ್ನು ಮದುವೆಯ ವಿಷಯವನ್ನು ಯೋಚಿಸುತ್ತಾಳೆ. ಗೌರಿಯು ವಿಶ್ರಾಂತಿಯನ್ನು ಪಡೆಯಲು ಏಕಾಂಗಿಯಾಗಿದ್ದಾಗ ತನ್ನ ಮನಸ್ಸಿನಲ್ಲಿ ಮೂರು ತಿಂಗಳಲ್ಲಿ ಪರಿಚಯವಾದ ಅನಿರುದ್ಧನ ಆಲೋಚನೆಗಳೇ ಕಾಡುತ್ತಿರುತ್ತವೆ. ಅವನಿಗೆ ಮದುವೆಯ ವಿಷಯ ಕೇಳಿದಾಗ 'ಮೈ

ಹ್ಯಾಮ್ ಮ್ಯಾರೀಡ್' ಎಂದಾಗ ತನ್ನ ಮನಸ್ಸಿನಲ್ಲಿ ಅನೇಕ ರೀತಿಯ ಗೊಂದಲಗಳು ಸೃಷ್ಟಿಯಾಗುತ್ತವೆ. ಏಕಾಂಗಿಯಾದಷ್ಟು ಅವನ ನೆನಪು ಹೆಚ್ಚಾಗುತ್ತದೆ. ಆದರಿಂದಲೇ ಕೆಲಸ ಮಾಡಲು ತಯಾರಾಗುತ್ತಾಳೆ. ನಾನು ಹುಚ್ಚಿಯಂತೆ ಮುಂಬೈಯಲ್ಲಿ ಏನು ಸಾಧಿಸಿದ್ದೇನೆ ಎಂಬ ಪ್ರಶ್ನೆ ಗೌರಿಯನ್ನು ಕಾಡುತ್ತಿರುತ್ತದೆ.

ತಾಯಿ ಅನಿರುದ್ಧನ ಪರಿಚಯ ತಿಳಿದ ತಕ್ಷಣ ಪತ್ರವನ್ನು ಬರೆಯುತ್ತಾಳೆ. ಹುಡುಗರನ್ನು ನಂಬುವ ಹಾಗಿಲ್ಲ, ನೀನು ಲೈಫ್‌ನ ವಿಷಯದಲ್ಲಿ ತುಂಬಾ ಹುಷರಾಗಿರು ಎಂಬುದಾಗಿ ಬರೆಯುತ್ತಾಳೆ.

ಲತಾ ಚಿಂಚೂ ಅವಸರವಾಗಿ ಬರುತ್ತಿರುವುದು ಕಂಡುಬರುತ್ತದೆ. ಲತಾ ಮತ್ತು ಧ್ರುವನ ಬಿಹೇವಿಯರ್ ಕಂಡು ಮನಸ್ತಾಪಕ್ಕೆ ಒಳಗಾಗಿರುತ್ತದೆ. ಈ ಗೊಂದಲದಲ್ಲಿ ಸರಿಯಾದ ರೀತಿಯಲ್ಲಿ ನಡಿವಳಿಕೆಯೂ ಇರುವುದಿಲ್ಲ ಸ್ಕೂಲಿನಲ್ಲಿ ಎಲ್ಲರಲ್ಲಿಯೂ ಹೊಂದಾಣಿಕೆಯಾಗದೇ ಏಕಾಂಗಿಯಾಗಿರುತ್ತಾನೆ. ಈ ವಿಷಯ ತಿಳಿಸಿದಾಗ ಗೌರಿ ಆ ಹೊತ್ತಿನ ಕೆಲಸವನ್ನು ಬಿಡಲು ತಯಾರಾಗುತ್ತಾಳೆ ಲತಾ ಅಲ್ಲಿಯೇ ಬಿಟ್ಟು ಕೆಲಸಕ್ಕೆ ಹೊರಡುತ್ತಾಳೆ. ಚಿಂಚೂನ ಮನಸ್ಥಿತಿ ಬದಲಾಯಿಸಲು ಅನೇಕ ರೀತಿಯ ಕೆಲಸಗಳನ್ನು ಮಾಡುತ್ತಾಳೆ. ಚಿಂಚೂ ಗೌರಿಯನ್ನು ಮೆಸ್ ಬೋರ್ಡಿಂಗ್ ಸ್ಕೂಲ್ ಯಾವ ರೀತಿಯಲ್ಲಿ ಇರುತ್ತೆ ತುಂಬಾ ಮಕ್ಕಳು ಇದ್ದಾರಲ್ಲ ನನ್ನನ್ನು ಬೋರ್ಡಿಗ್ ಸ್ಕೂಲಿಗೆ ಕಳಿಸುತ್ತಾರಂತೆ ನಾವು ಅವರು ಮಾತು ಕೇಳೊಲ್ಲಾಂತ ಎಂಬ ವಿಷಯ ಹೇಳಿದಾಗ ಅದನ್ನು ಮರೆಯುಲು ಪ್ರಯತ್ನಿಸುತ್ತಾನೆ.

ಗೌರಿಯೂ ಮಾರನೆಯ ದಿನ ಆಫೀಸಿಗೆ ಹೋದಾಗ ರಜತ್ ತುಂಬಾ ಕೋಪದಿಂದ ಇರುತ್ತಾನೆ ನಿನ್ನೆ ಹೆಚ್ಚಿನ ಕೆಲಸವಿತ್ತು ಫೋನ್ ಇಲ್ಲವಾ ನಿಮಗೆ ಸುದ್ಧಿ ತಿಳಿಸಲು ಸಂಪರ್ಕ ಅವಶ್ಯಕ ಫೋನ್ ಇಲ್ಲವೆ ಮ್ಯಾನೇಜ್ ಮಾಡೋದು ಕಷ್ಟ. ಚಿಂಚೂನ ಪರಿಸ್ಥಿತಿ ನೆನಪಿಸಿಕೊಂಡು ಬೋರ್ಡಿಂಗ್ ಸ್ಕೂಲಿಗೆ ಕಳಿಸಿಬಿಡುತ್ತಾದೆನೂ ಚಿಂಚೀನನ್ನು ಲತಾ ಅರ್ಥಮಾಡಿಕೊಳ್ಳುತ್ತಿಲ್ಲವೆ ಅವನ ಭವಿಷ್ಯ ಹೇಗೆ ರೂಪಿಸಿಬೇಕೆಂಬುದು ನಿರ್ಧರಿಸಬಾರದ ಎಂಬ ಯೋಜನೆಯಲ್ಲಿ ಒಳಗಾಗುತ್ತಾಳೆ ಲತಾ ಪರಿಸ್ಥಿತಿಯು ನೆನಪಿಗೆ ಬರುತ್ತದೆ. ನಾನು ಅಜ್ಜಿ ಜೊತೆ ಸತ್ತು ಹೋಗಿದ್ದರೆ ಚೆನ್ನಾಗಿತ್ತು ಎಂಬ ವಿಷಯ ನೆನಪಿಗೆ ಬರುತ್ತೆ. ಲತಾ ಮತ್ತು ಧ್ರುವನ ಪ್ರೇಮದಲ್ಲಿ ಚಿಂಚೂ ಬಲಿಯಾಗುತ್ತಾನೆ. ಮಾನಸಿಕವಾಗಿ ನೋವನ್ನು ಅನುಭವಿಸುತ್ತಿರುತ್ತಾನೆ. ರಜತ್, ಶರದ್ ಗೌರಿಯ ಮಾತುಕತೆಯು ಮುಂದುವರೆಯುತ್ತದೆ. ತನ್ನ ಜೀವನದಲ್ಲಿ ಆದ ಅನುಭವಗಳು ನೆನವರಿಕೆಯಾಗುತ್ತವೆ. ಮಹಿಳೆಯು ನಗರೀಕರಣದಲ್ಲಿ ದುಡಿಯುವಳಾಗಿದ್ದು ಅಲ್ಲಿನ ಪರಿಸ್ಥಿತಿಯು ದಿನಾ ಬಿಡುವಿಲ್ಲದೆ ಕೆಲಸದಲ್ಲಿ ನಿರತರಾಗಿರುವುದನ್ನು ನೋಡುಬಹುದು ಅವಳ ಆಲೋಚನೆ ರೀತಿಯೇ ಭಿನ್ನವಾಗಿರುತ್ತದೆ.

ಅಪ್ಪನಿಗೆ ಪತ್ರ ಬರೆಯುವುದು ಮುಂದೆ ಹಾಕುತ್ತಲೇ ಇರುತ್ತಾಳೆ ಅನಿರುದ್ಧನ ವಿಷಯವನ್ನು ಕುರಿತು ಪತ್ರ ಬರೆಯುತ್ತಾಳೆ. ವೀಟೀಗೆ ಹೋಗಲು ಪ್ರಯಾಣವನ್ನು ಬೆಳೆಸುತ್ತಾಳೆ ಪ್ರಯಾಣದಲ್ಲಿ ಆದ ಅನುಭವಗಳು ಬೆಚ್ಚಿ ಬೀಳಿಸುತ್ತವೆ. ಹೊರಗಡೆ ಕೂಗಾಟ ಗಂಡಾಳು ರಕ್ತವನ್ನು ಸುರಿಸಿಕೊಳ್ಳುತ್ತಾ ಹತ್ತಿದ ಟ್ರೈನ್ ಅದನ್ನು ಕಂಡಾಗ ಅದರ ವಾಸನೆ ತಲೆ ತಿರಿಗಿದಂತೆ ಆಗುತ್ತದೆ. ತನ್ನ ಬದುಕು ನೆನಪಾಗುತ್ತದೆ. ಏಕಾಂಗಿಯಾಗಿದ್ದಾಗ ತೊಂದರೆ ಆದರೆ ಮನೆಯವರಿಗೆ ವಿಷಯ ತಿಳಿಸುವುದು ಕಷ್ಟ ತನ್ನ ಕಾಳಜಿ ವಹಿಸುವವರು ಯಾರಾದರು ಇರಲೇಬೇಕು ಎಂಬುದು ಅರಿವಾಗುತ್ತದೆ. ಅನರುದ್ಧ ಗೌರಿ ಮನೆಯೊಳಗೆ ಪ್ರವೇಶಿಸುತ್ತಿರಬೇಕಾದರೆ ಪೂನಂ ಕಾಣುತ್ತಾಳೆ. ಇವರು ಮನೆಯೊಳಗೆ ಪ್ರವೇಶಿಸಿ ಏಕಾಂತದಲ್ಲಿ ಒಬ್ಬರಲೊಬ್ಬರು ಬೆರೆಯುತ್ತಾಳೆ ಇನ್ನಷ್ಟು ಪ್ರೀತಿ ಅನಿರುದ್ಧನ ಮೇಲೆ ಹೆಚ್ಚಾಗುತ್ತದೆ. ಅನಿರುದ್ಧ ಹೋದ ನಂತರವೂ ಅದೇ ಧ್ಯಾನದಲ್ಲಿರುತ್ತಾಳೆ. ಬಾಲ್ಕಾನಿನಲ್ಲಿ ನಿಂತು ವೀಕ್ಷಿಸುತ್ತಿದ್ದಾಗ ನ್ಯೂಸ್‌ನಲ್ಲಿ ಬಾಂಬ್ ಸ್ಫೋಟದ ವಿಷಯ ಬರುತ್ತಿರುತ್ತೆ ಅನೇಕ ರೀತಿಯ ಆತಂಕಗಳು ಮುಂಬೈಯಲ್ಲಿ ನಡೆದಿರುತ್ತದೆ ಈ ವಿಷಯವನ್ನು ತಿಳಿದು ತಂದೆ ತಾಯಿ ಫೋನ್ ಮಾಡಿದಾಗ ಮುಂಬೈಯನ್ನು ಬಿಟ್ಟು ಮೈಸೂರಿಗೆ ಬಂದುಬಿಡು ಎಂಬುದಾಗಿ ಹೇಳುತ್ತಾರೆ. ಗೌರಿ ಮುಂಬೈಗೆ ಬಂದಾಗಲಿಂದಲೂ ಮೈಸೂರಿಗೆ ಹೋಗಿರುವುದಿಲ್ಲ ಅಪ್ಪ ಮಾತಾಡಿದ ರೀತಿಯ ಎಲ್ಲಾವನ್ನು ಕೇಳಿದ ತಕ್ಷಣ ಮೈಸೂರಿಗೆ ಹೋಗಲು ಸಿದ್ಧಳಾಗುತ್ತಾಳೆ ಆಫೀಸನಲ್ಲಿ ಒಂದು ವಾರ ರಜೆಯನ್ನು ಪಡೆಯಲು ರಜತನಿಗೆ ತಿಳಿಸಿದಾಗ ಅಸಮಾಧಾನವನ್ನು ವ್ಯಕ್ತಪಡಿಸುತ್ತಾಳೆ.

ಮೈಸೂರಿಗೆ ಹೋಗುವ ವಿಷಯ ಹೇಳಲು ಅನಿರುದ್ಧ ಭೇಟಿಯಾದಾಗ ಅವರಲ್ಲಿ ಮಾತುಕತೆಯಲ್ಲಿ ವಿಭಿನ್ನತೆ ಇರುತ್ತದೆ. ಬೇಗ ಬಂದುಬಿಡು ಎಂಬ ವಿಷಯವನ್ನು ತಿಳಿಸುತ್ತಾನೆ ಆಂಟಿಯ ವಿಷಯ ಪ್ರಸ್ಥಾಪಿಸಿದಾಗ ಅವರಿಗೆ ಅನಾರೋಗ್ಯ ಕೆಟ್ಟಿದೆ ಇತ್ತೀಚಿಗೆ ಅವರೊಂದಿಗೆ ಮಾತುಕತೆ ಕಡಿಮೆಯಾಗಿದೆ ಎಂಬ ವಿಚಾರ ತಿಳಿಸಿದಾಗ ಆಂಟಿಯನ್ನು ಬೇಟಿಯಾಗುವ ಸನ್ನಿವೇಶ ಬಂದರೆ ಸರಿಹೋಗುತ್ತೆ ಎಂಬ ಯೋಚನೆಯಲ್ಲಿದ್ದಾಗ ಅನಿರುದ್ಧ ಹೊರಡಲು ತಯಾರಾಗುತ್ತಾನೆ.

ಮುಂಬೈಯಿಂದ ಹೋದಾಗ ಅಪ್ಪನ ನೆನಪಿಗೆ ಕಾಟನ್ ಸೀರೆ ಪಾಪಳ ಮಕ್ಕಳಿಗೆ ಆಟದ ಸಾಮಾನು ಅಡಿಗೆ ವೆಂಕಮ್ಮನಿಗೆ ೯ ಗಜದ ಪೂನಾ ಸೀರೆಯನ್ನು ತಂದು ಕೊಡಲು ತಯಾರಿಯಲ್ಲಿದ್ದಾಗ ಕೆಲವೊಂದು ನೆನಪು ಬರುತ್ತವೆ. ಅನಿರುದ್ಧನೊಡನೆ "ಅನಿ...ನೀನೆಂದೂ ನನ್ನನ್ನು ಬಿಟ್ಟುಹೋಗಬೇಡಿ?" ಎಂದು ಇನ್ನಷ್ಟು ಗಾಢವಾಗಿ ಅಪ್ಪುತ್ತಾಳೆ.

ಪ್ರಯಾಣ ಮುಂದುವರೆದಂತೆ ಚಿಂಚೂ ಶ್ಯಾಂ, ಪೂನು, ಲತಾ, ಇವರ ನೆನಪು ಕಡಿಮೆಯಾದಂತೆಲ್ಲಾ ಅನಿರುದ್ಧ ನೆನಪು ಹೆಚ್ಚಾಗುತ್ತದೆ ಅದೇ ನೆನಪು ಪದೇ ಪದೇ ಬರುತ್ತಿರುತ್ತದೆ. ಮೈಸೂರಿಗೆ ಮುಟ್ಟಿದ ಹೊತ್ತಿಗೆ ಅಪ್ಪನ ಭೇಟಿಯಾಗುತ್ತಾರೆ. ಅಲ್ಲಿ ಅವರ ಮಾತುಕತೆಯೂ

ನಡೆಯುತ್ತದೆ ಮನೆಗೆ ತಲುಪಿದಾಗ ಮುಂಬೈಯ ಪರಿಸರ ಚರ್ಚೆಯಾಗುತ್ತದೆ ಅಲ್ಲಿಯ ವಾತಾವರಣ, ಜನರ ಪರಿಸ್ಥಿತಿ, ಬಾಂಬ್ ಸ್ಫೋಟ ಎಲ್ಲವನ್ನು ವಿವರಿಸುತ್ತಾಳೆ. ಗೌರಿಗೆ ಬಿಸಿನೀರಿನ ಎಣ್ಣೆ ಸ್ನಾನವು ಪ್ರಸಿದ್ಧಿಯಾಗಿದ್ದು ಅದನ್ನು ಮುಗಿಸಿದ ನಂತರ ವೆಂಕಮ್ಮ ನೆನಪಿಗೆ ಬರುತ್ತಾಳೆ. ಪೋಟೋ ಆಲ್ಬಮ್ ತೆಗೆದು ನೆನಪಿನಲ್ಲಿ ಇರುತ್ತಾಳೆ. ಸಿಹಿನೆನಪು ಸ್ಕೂಲಿನಲ್ಲಿ ಮೈನಾವತಿ ಮೊಣಕಾಲುವರೆಗೂ ಕೂದಲಿರುವರು ಮುಂದೆ 'ವಿಡೋ' ಆಗ್ತಾರಂತೆ ಎಂಬ ವಿಷಯ ತಿಳಿದಾಗ ರಾತ್ರೋರಾತ್ರಿ ತಾಯಿಗೆ ತಿಳಿಯದಂತೆ ಎರಡು ಇಂಚು ಕೂದಲು ಕತ್ತರಿಸಿ ತಾಯಿಯಿಂದ ಬೈಗಳ ಪಾಠ ಕೇಳಿದ್ದು ಇವೆಲ್ಲವೂ ಬಾಲ್ಯದ ನೆನಪುಗಳು ಬರುತ್ತಿರುತ್ತವೆ. ಆ ನೆನಪುಗಳಲ್ಲಿಯೇ ಅನಿರುದ್ಧನ ನೆನಪು ಕಾಲೇಜಿನಲ್ಲಿ ಪಾಠ ಹೇಳುತ್ತಿರಬಹುದು, ಪೇಂಟ್ ಮಾಡುತ್ತಿರಬಹುದು, ಜಹಾಂಗೀರನಲ್ಲಿ ಹೊಸ ಪ್ರದರ್ಶನ ನೋಡುತ್ತಿರಬಹುದು, ಒಬ್ಬನೇ ವ್ಯನಿಲಾ ಐಸ್‌ಕ್ರೀಂ, ಚಾಕೊಲೇಟ, ಸಾಸ್ ತಿನ್ನತ್ತಿರಬಹುದು. ಇಲ್ಲವೇ ಅಂದು ಕಂಡ ಜೀನ್ಸ್ ಟೀಶರ್ಟನ ಗೆಳತಿಯೊಡನೆ ಓಡಾಟದ ನೆನಪುಗಳು ಬರುತ್ತಿರುತ್ತವೆ ತಾಯಿಯು ಕರೆದಾಗ ಮನಸ್ಸಿಲ್ಲದ ಮನಸ್ಸಿನಿಂದ ಊಟಕ್ಕೆ ಹೊರಡಲು ಸಿದ್ಧಳಾಗುತ್ತಾಳೆ. ಎಲ್ಲೇ ಇದ್ದರೂ ಅನಿರುದ್ಧನ ನೆನಪು ಮರೆಯಲು ಸಾಧ್ಯವಾಗುವುದಿಲ್ಲ. ಅವನ ಜೊತೆಯಲ್ಲಿ ತನ್ನ ಜೀವನವನ್ನು ಕಳೆಯಲು ಸಿದ್ಧಳಾಗಿರುತ್ತಾಳೆ.

ಸಂಜೆ ಮನೆಯಲ್ಲಿ ಯಾರು ಇಲ್ಲದ ಸಮಯದಲ್ಲಿ ಅಪ್ಪನ ಪುಸ್ತಕ 'ಗಾನ್ ವಿದ್ ದ ವಿಂಡ್' ಇದರಲ್ಲಿ ಕಮಲಾ ಬರೆದ ಪತ್ರವಿರುತ್ತದೆ. ಅದನ್ನು ಕೇಳಲು ಮುಂದಾಗುವುದಿಲ್ಲ ಈ ವಿಷಯ ಅನಿರುದ್ಧನ ಜೊತೆ ಹೇಳಲು ತುಂಬಾ ಸಂಕೋಚ ಬರುತ್ತದೆ. ಚಿಂಚೂ ಏನು ಮಾಡುತ್ತಿರುವನೋ ಬೋರ್ಡಿಂಗ್ ಸ್ಕೂಲಿಗೆ ಹೋಗಿರುವನೋ ಅಥವಾ ಒಬ್ಬನೇ ಇದಾನೋ ಎಂಬ ಯೋಚನೆ ಬರುತ್ತಿತ್ತು. ಆ ಹುಡುಗಿ ಯಾರೂ ಪರಿಚಯವಿಲ್ಲದ ಹುಡುಗನೊಂದಿಗೆ ಸಂಬಂಧ ಬೆಳೆಸುವುದು ಸರಿಯಲ್ಲ ಹಾಗೇ ಮಾಡುವಂತಹದು ನಮ್ಮ ಸಂಸ್ಕೃತಿಗೆ ವಿರುದ್ದವಾದ 'ಪದ್ಧತಿಯಾಗಿದೆ ಎಂಬ ವಿಷಯ ತಿಳಿಸುತ್ತಾಳೆ. ಬೇಕಾದರೆ ಪರಿಚಯವನ್ನು ಪಡೆದು ಮದುವೆಯಾಗು ಎಂದು ಅವರ ತಾಯಿ ಹೇಳುತ್ತಾಳೆ.

ಮಾರನೆಯ ದಿನ ಚಾಮುಂಡಿ ಬೆಟ್ಟಕ್ಕೆ ಹೊರಡಲು ಸಿದ್ದರಾಗುತ್ತಾರೆ. ತಂದೆ ಮತ್ತು ಮಗಳು ಚಾಮುಂಡಿಗೆ ಹಣ್ಣು ಕಾಯಿ ಮಾಡಿಸಿ ಹೊರಗಡೆ ಬಂದಾಗ ಅಲ್ಲಿನ ಪ್ರಪಂಚವೇ ವಿಭಿನ್ನವಾಗಿರುತ್ತದೆ ತಂದೆ ಮಗಳು ಮಾತುಕತೆಯಲ್ಲಿದ್ದಾಗ ತಂದೆಯ ಪರಿಚಯದೊಬ್ಬರ ಬೇಟಿಯಾಗುತ್ತದೆ. ಅಲ್ಲಿಂದ ಅವರು ಗೌರಿಯ ವಿಚಾರವನ್ನೆಲ್ಲಾ ತಿಳಿಸುತ್ತಾರೆ ಅಲ್ಲಿಂದ ಶಾಪಿಂಗ್ ಹೊರಡುತ್ತಾರೆ. ಅಲ್ಲಿ ಚಿಂಚೂನ ನೆನಪಿಗೆ ಮ್ಯಾಗ್ನೆಟಿಕ್ ಚೆಸ್ ಬೋರ್ಡು, ಅನಿರುದ್ಧನ ನೆನಪಿಗಾಗಿ ಶ್ರೀಗಂಧದ ಪೆನ್ ಕೊಳ್ಳುತ್ತಾಳೆ. ತಾಯಿಯವರಿಗೆ ಚಪ್ಪಲಿಯನ್ನು ಕೊಳ್ಳುತ್ತಾಳೆ. ಸಂಜೆ ಮನೆ ಹೋಗುವುದರಲ್ಲಿ

ರಾತ್ರಿಯಾಗಿರುತ್ತದೆ. ಊಟವನ್ನು ಮುಗಿಸಿ ಮಲಗುವ ಹೊತ್ತಿನಲ್ಲಿ ಇನೇನು ಮುಂಬೈಗೆ ಹೊರಡುವ ದಿನ ಸಮೀಪವಾಗಿರುತ್ತದೆ. ಆದ್ದರಿಂದ ತಂದೆ ಮದುವೆಯ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ೧೫-೨೦ ವರ್ಷಗಳ ನಂತರ ನಿನ್ನ ಬದುಕು ಬೇರೆಯೇ ಆಗಿರುತ್ತದೆ. ಮನುಷ್ಯನಿಗೆ ಮದುವೆಯು ಮುಖ್ಯ. ಏಕಾಂಗಿಯಾಗಿ ಜೀವನ ಸಾಗಿಸುವುದು ಕಷ್ಟಕರವಾದದ್ದು. ನಾವು ಆರಿಸಿದ ಹುಡುಗನನ್ನೇ ಬೇಡ ನೀನು ಇಷ್ಟಪಟ್ಟ ಹುಡುಗನನ್ನು ಮದುವೆಯಾಗು ಎಂಬ ವಿಚಾರವನ್ನು ತಿಳಿಸುತ್ತಾನೆ. ಆಗ ಅನಿರುದ್ಧನ ಆಂಟಿಯೂ ನೆನಪಿಗೆ ಬರುತ್ತಾಳೆ. ಅನಿರುದ್ಧನ ನೆನಪು ಪದೇ ಪದೇ ಕಾಡುತ್ತಿರುತ್ತದೆ.

ಗೌರಿ ಮೊದಲ ಬಾರಿಗೆ ಅಪ್ಪನಿಗೋಸ್ಕರ ಮದುವೆಯಾಗಲು ಪ್ರಯತ್ನಿಸುತ್ತಾಳೆ. ಗೌರಿಯೂ ಮುಂಬೈಗೆ ಹೊರಡುವ ದಿನ ಹತ್ತಿರ ಬರುತ್ತೆ ಮನೆಯಲ್ಲಿ ಎಲ್ಲಾ ರೀತಿಯಲ್ಲಿಯೂ ಗೊಂದಲದಿಂದ ಕೂಡಿರುತ್ತದೆ. ಚಾಮುಂಡಿಯಲ್ಲಿ ಕಾಣಿಸಿಕೊಂಡ ಪರಿಚತರಾದ ಸುಬ್ಬರಾಯರು ಮನೆಗೆ ಬರಲು ನಿಶ್ಚಿಯಿಸಿರುತ್ತಾರೆ. ಗೌರಿಯನ್ನು ತಾಯಿಯು ತಯಾರು ಮಾಡುತ್ತಾಳೆ ೬೦-೬೫ ವಯಸ್ಸಿನ ಗಂಡ-ಹೆಂಡತಿ ೩೫-೪೦ ವಯಸ್ಸಿನ ಮಗ ಬರುತ್ತಾರೆ.ಗೌರಿಯು ಸಿದ್ಧಳಾಗಿರುತ್ತಾಳೆ. ಸೀತತಾರನನ್ನು ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿರುತ್ತಾಳೆ ಅವರು ಗೌರಿಯನ್ನು ನೋಡಿ ಹೋದಾಗ ಪತ್ರವನ್ನು ಬರೆಯುವುದಾಗಿ ಹೇಳಿ ಹೋಗಿರುತ್ತಾರೆ ಹೋದ ನಂತರವೇ ಫೋನ್ ಮಾಡುತ್ತಾರೆ ತಾಯಿಗೆ ಎಲ್ಲಿಲ್ಲದ ಆತಂಕವಾಗಿರುತ್ತದೆ ಆದರೆ ಆ ಹುಡುಗನನ್ನು ಒಪ್ಪಲು ಗೌರಿಯೂ ತಯಾರಾಗಿರುವುದಿಲ್ಲ. ತಾಯಿಯೆ ಈ ವಿಷಯದಲ್ಲಿ ಸಾಕಷ್ಟು ನೋವನ್ನು ಅನುಭವಿಸುತ್ತಿರುತ್ತಾಳೆ ಗೌರಿಯು ಈ ರೀತಿಯ ಕಟ್ಟುನಿಟ್ಟಿಗಳನ್ನು ಮರೆತು ಸ್ವತಂತ್ರ್ಯವಾಗಿ ಜೀವನ ಆರಂಭಿಸುವುದೇ ಆಕೆಯ ನಿರ್ಧಾರ ಆದ್ದರಿಂದಲೇ ಮುಂಬೈಯಲ್ಲಿ ಜೀವನವನ್ನು ಆರಂಭಿಸುತ್ತಿರುತ್ತಾಳೆ. ಮತ್ತೆ ಮುಂಬೈಗೆ ಹೊರಡಲು ಸಿದ್ಧಳಾಗುತ್ತಾಳೆ. ಈ ಬದುಕನ್ನು ಮರೆತು ಮುಂಬೈಯ ಪರಿಸರ ನೆನಪಿಗೆ ಬರುತ್ತದೆ. ಅಲ್ಲಿ ಚಿಂಚೂ ನನಗಾಗಿ ಕಾಯುತ್ತಿರುವನೆಂದು ತಾನು ಮೈಸೂರನ್ನು ಬಿಟ್ಟು ತನ್ನಲ್ಲಿ ತಾನೇ ಮರೆತಿರುವ ಹಾಗಿಯೇ ಮುಂಬೈ ಸೇರುತ್ತಾಳೆ. ಮನೆಯನ್ನು ತಲುಪುವ ಹೊತ್ತಿಗೆ ಪುನಃ ಕಾಣುತ್ತಾಳೆ. ಮೂರನೇಯ ದಿನ ಆಫೀಸಿಗೆ ಹೋದಾಗ ಮನೆಯ ವಿಚಾರ ಮೈಸೂರಿನಲ್ಲಿ ಸುತ್ತಾಡಿ ಸ್ನೇಹಿತರ ಜೊತೆ ಮಾತುಕತೆಯಾಗುತ್ತದೆ. ರಜತ್ ಗೌರಿಯ ಭೇಟಿಗಾಗಿ ಕಾಯುತ್ತಿರುತ್ತಾನೆ.  ಗೌರಿಯ ಭೇಟಿಯಿಂದ ತುಂಬಾ ಸಂತೋಷವನ್ನು ಪಡುತ್ತಾನೆ. ನಂತರ ಗೌರಿಯ ಏಕಾಂಗಿ ಜೀವನ ಆರಂಭಿಸುತ್ತಲೇ ಇರುತ್ತಾಳೆ ಅನಿರುದ್ಧನ ಭೇಟಿಗಾಗಿ ಜಹಾಂಗೀರ್ ತಲುಪುತ್ತಾಳೆ ಅನಿರುದ್ಧ ಕಂಡುಬರುವುದಿಲ್ಲ ನಿರಾಸೆಯಿಂದ ಮನೆಗೆ ತಲುಪುತ್ತಾಳೆ.

ಅನಿರುದ್ಧನ ಭೇಟಿಗಾಗಿ ಹೋರಟಾಗ ಅವರಿಗೆ ಎಲ್ಲಿಯೂ ಅವನ ಅಡ್ರಸ್ ಸಿಗುವುದಿಲ್ಲ ಪ್ರಿನ್ಸಿಪಲ್ ಅನಿರುದ್ಧನ ಅಡ್ರಸ್ ಕೊಟ್ಟಾಗ ಹುಡುಕಲು ಹರಿಭಾವೂನ್ನ ಸಹಾಯ ಪಡೆದು ಹುಡಕಲು

ಹೋದಾಗ ಹಳೆಯ ಮನೆಯಾಗಿರುತ್ತದೆ. ಮಧ್ಯ ವಯಸ್ಸಿನ ಗೌನಿನ ಹೆಂಗಸೊಬ್ಬಳ ಪರಿಚಯಾವಾಗಿ ವಿಚಾರಿಸಿದಾಗ ಆತನಿಗೆ ೩ ವರ್ಷದ ಮಗುವಿರುವುದು ತಿಳಿದುಬರುತ್ತದೆ. ಆತನು ಯಾರೊಂದಿಗೂ ಬೆರೆಯುತ್ತಿರಲಿಲ್ಲ. ಇದ್ದಕ್ಕಿದ್ದಂತೆ ಅನಿರುದ್ಧನು ಮನೆಯನ್ನು ಖಾಲಿ ಮಾಡಿದ ವಿಷಯವನ್ನು ಅಲ್ಲಿದ್ದ ಆಯಾ ತಿಳಿಸುತ್ತಾರೆ.

ಎಷ್ಟು ಅನಿರೀಕ್ಷಿತವಾಗಿ ಬಂದನೋ ಅಷ್ಟೇ ಅನಿರೀಕ್ಷಿತವಾಗಿ ಅನಿರುದ್ಧ ಹೊರಟು ಹೋಗುತ್ತಾನೆ. ಗೌರಿಗೆ ತಾನು ತಾಯಿಯಾಗಿರುವಳೆಂದು ತಿಳಿಯುತ್ತದೆ. ದನಿಯಾಗಿ ಪ್ರವೇಶಿಸಿದ ಅನಿರುದ್ಧ ಹೀಗೆ ಅನುಭವವಾಗಿ ಉಳಿದಾಗ ಎಂದಿನ ತನ್ನ ತಲ್ಲಣ ದ್ವಂದ್ವಗಳ ನಡುವೆಯೂ ಆಕೆಯ ಪ್ರಜ್ಞಾ ಸ್ತರದಲ್ಲಿ ಕಿಂಚಿತ್ತೂ ಬಿರುಕೊಡೆಯದೆ ಈ ನಿರ್ಧಾರ ಪೂರ್ತಿ ತನ್ನದು ಎಂದು ಧೃಢವಾಗುತ್ತಲೆ ಅನಿರುದ್ಧನಿಗೆ ಎಲ್ಲ ಹೇಳಿಬೇಕೆಂಬ ಆಸೆ ಒತ್ತರಿಸಿ ಬರತೊಡಗುತ್ತದೆ. ಆಗ ಆಕೆ ಪತ್ರ ಬರೆಯುವುದು ಚಂಚೂಗೆ! "ನಿನಗೊಬ್ಬ ತಮ್ಮನೋ ತಂಗೀನೋ ಆಡೋಕೆ ಬರುತ್ತಾರೆ"[೧೦]

ಈ ಕಾದಂಬರಿಯಲ್ಲಿ ಕೇವಲ ಗಂಡಿನ ಅಥವಾ ಹೆಣ್ಣಿನ ಕಥೆಯೆಂಬುದಕ್ಕಿಂತ ವ್ಯಕ್ತಿಯೊಬ್ಬಳ ಶೋಧನೆಯನ್ನು ಒಳಗೊಂಡಿದೆ ಎಂದು ಹೇಳುತ್ತೇನೆ.

# ಫಲಿತಗಳು

ಆಧುನಿಕ ಮಹಿಳಾ ಸಾಹಿತ್ಯವೂ ಇಂದು ತನ್ನದೇ ಆದ ವಿಶಿಷ್ಟ ನೆಲೆಯಿಂದ ಮುಂದುವರೆಯುತ್ತಿದೆ. ಹಲವಾರು ಲೇಖಕಿಯರು ಇಂದು ಬರವಣಿಗೆಯಲ್ಲಿ ತೊಡಗಿರುವುದನ್ನು ಕಾಣಲಾಗಿದೆ. ಇಂತಹ ಲೇಖಕಿಯರಲ್ಲಿ ಎಲ್ಲರಿಗಿಂತ ಹೆಚ್ಚು ಧೈರ್ಯದಿಂದ ನಿರ್ಭೀತಿಯಿಂದ ಬರೆದ ಹಲವಾರು ವಿಮರ್ಶಕರ ವಿಮರ್ಶೆಗೆ ಪ್ರಮುಖರಾದವರು ಉಮಾರಾವ್‌ರವರು. ತಮ್ಮ ಕೃತಿಗಳಲ್ಲಿ ಇವರು ಸ್ತ್ರೀ ವಿಮೋಚನೆಗೆ ಹೇಗೆ ಒತ್ತು ನೀಡಿದ್ದಾರೆ ಎಂಬುದನ್ನು ತಿಳಿಯುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗಿದೆ. ಈ ಪ್ರಕ್ರಿಯೆಯಲ್ಲಿ ಉಮಾರಾವ್‌ರವರ ಕಥಾಸಾಹಿತ್ಯದಲ್ಲಿ ಬರುವ ಸ್ತ್ರೀಯರು ಹೇಗೆ ಪುರುಷ ಪ್ರಧಾನ ಧಾರೆಯಿಂದ ದೂರ ಸರಿದು ತಮ್ಮನ್ನು ಬೇರ್ಪಡಿಸಿಕೊಂಡು ಸ್ವತಂತ್ರರಾಗಿ ನಿಲ್ಲುತ್ತಾರೆ ಎಂಬುದನ್ನು ಚಿತ್ರಿಸುವುದಾಗಿದೆ.

ಭಾರತೀಯ ಸಂಸ್ಕೃತಿಯಲ್ಲಿ ಕಂಡುಬರುವ ಪ್ರಧಾನದಾರೆಯಾದ ಪುರುಷ ಪ್ರಧಾನ ಸಮಾಜದ ವಿರುದ್ಧ ಉಮಾರಾವ್‌ರವರು ಹಿಡಿದ ಭಿನ್ನ ದಾರಿಯ ಬಗ್ಗೆ ಕುರಿತು ವಿವರಿಸಲಾಗಿದೆ. ಕನ್ನಡದ ಇತರ ಲೇಖಕಿಯರಿಂಗಿಂತ ಉಮಾರಾವ್‌ರವರು ಬೇರೆಯದೇ ಆದ ಸ್ಥಾನವನ್ನು ಪಡೆದುಕೊಂಡಿರುವುದು ಅವರ ಆಧುನಿಕತಾವಾದಿ ಚಿಂತನೆಯ ಕ್ರಮದಿಂದ. ಈ ನಿಟ್ಟಿನಲ್ಲಿ ಉಮಾರಾವ್‌ರವರು ಮುಕ್ತವಾದ ಮನಸ್ಸು, ವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವ ಇವರ ಕತೆಗಳಲ್ಲಿ ಹೆಣ್ಣಿನ ಘನತೆಯ ಪ್ರಶ್ನೆಯನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ನಿರ್ವಹಿಸಲು ಪ್ರಯತ್ನಿಸಿದ್ದೇನೆ. ಪುರುಷ ನಿರ್ಮಿತ ಸಮಾಜ ಮತ್ತು ಸಾಹಿತ್ಯದಲ್ಲಿ ತಮ್ಮ ನೇರ, ದಿಟ್ಟ ನಿಲುವುಗಳಿಂದ ಅವುಗಳ ವಿರುದ್ಧ ಮಾತನಾಡಿ ತಮ್ಮದೇ ಆದ ಭಿನ್ನ ಹಾದಿಯ ಮೂಲಕ ತಮ್ಮ ಕತೆಗಳಲ್ಲಿನ ನಾಯಕಿಯರು ಹೇಗೆ ಸ್ವತಂತ್ರ ಮನೋಭಾವದಿಂದ ಮುನ್ನಡೆಯುತ್ತಾರೆ ಎನ್ನುವುದನ್ನು ಮುಖ್ಯವಾಗಿ ಕಾಣುತ್ತೇವೆ.

* ಉಮಾರಾವ್‌ರವರು ತಮ್ಮ ಸಾಹಿತ್ಯದಲ್ಲಿ ತಾವೆ ಸೃಷ್ಟಿಸಿಕೊಂಡ ಒಂದು ನೈತಿಕತೆಯಿದೆ. ಅದು ಸಂಪ್ರದಾಯಿಕ ನೈತಿಕ ಪ್ರಜ್ಞೆಗಿಂತ ಭಿನ್ನ ಇದೆ ಎಂದು ಹೇಳಬಹುದು. ಅದು ಸ್ತ್ರೀ ಪುರುಷರಿಬ್ಬರಲ್ಲೂ ಸಮಾನವಾದ ಪ್ರಭಾವ ಬೀರುತ್ತಿರುತ್ತದೆ. ಅಂದರೆ ಹೆಣ್ಣು ಮತ್ತು ಗಂಡಿನ ನಡುವಿನ ಸಂಬಂಧದಲ್ಲಿ ಹೆಣ್ಣು ಮತ್ತೊಂದು ಗಂಡಿನ ಜೊತೆ ಸಂಬಂಧ ಬೆಳೆಸುವುದನ್ನು ಅನೈತಿಕತೆ ಎಂದು ಭಾವಿಸುವುದಿಲ್ಲ. ಗಂಡು ತನ್ನನ್ನು ತಾನು ವ್ಯಾಖ್ಯಾನಿಸಿಕೊಳ್ಳುವಾಗ ಹೇಗೆ ಇದನ್ನು ಅಪರಾಧ ಅಂತ ಭಾವಿಸುತ್ತಾನೋ, ಹೆಣ್ಣು ಹಾಗೆ ಭಾವಿಸುತ್ತಾಳೆ.

* ಗಂಡು–ಹೆಣ್ಣಿನ ಸಂಬಂಧದ ನೆಲೆಯಲ್ಲಿ ಉಮಾರಾವ್‌ರವರು ಹೆಣ್ಣಿನೊಡನೆ ಪ್ರಯೋಗಗಳನ್ನು ನಡೆಸುವಂತಹ ಅನೇಕ ಪುರುಷ ಪಾತ್ರಗಳನ್ನು ಚಿತ್ರಿಸಿದ್ದಾರೆ. ಪುರುಷ ಪ್ರಯೋಗಕ್ಕೆ ಒಳಗಾಗುವ ಸ್ತ್ರೀ ಪಾತ್ರಗಳ ನೋವು, ಅಸಹಾಯಕತೆ ದಿಗ್ಭ್ರಮೆಗಳನ್ನು ಅವರ ಒಟ್ಟೊಟ್ಟಿಗೆ ಚಿತ್ರಿಸಿದ್ದಾರೆ. ಇವರು ಗೌರಿ, ಲತಾರಂತಹ ಪಾತ್ರಗಳು ಸ್ವತಃ ತಾವೂ ಗಂಡುಗಳೊಂದಿಗೆ ಪ್ರಯೋಗದಲ್ಲಿ ತೊಡುಗುತ್ತಾರೆ. ಇಂಥ ಪ್ರಯೋಗಗಳು ಜೀವನದ ಸಂಕಟಕರ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನಗಳೇ ಹೊರತು ಕೇವಲ ಕಾಮುಕತೆ ಅಲ್ಲ.

* ಇವರ ಸಾಹಿತ್ಯದಲ್ಲಿ ವಿವಾಹೇತರ ಲೈಂಗಿಕ ಸಂಬಂಧಗಳನ್ನು ಸರಳ, ನೈತಿಕ ದೃಷ್ಟಿಕೋನದಿಂದ ಕಾಣುತ್ತೇವೆ.

* ಇಲ್ಲಿಯ ಕತೆಗಳು ಹೆಣ್ಣಿನ ಮನದ ಕ್ಷೋಭೆಯ ಒತ್ತಡದಲ್ಲೂ ಆಂತರಂಗಿಕವಾಗಿ ಸಾಂಸ್ಕೃತಿಕ ಎಲ್ಲೆಯನ್ನು ಮೀರಿದ ಸ್ವಯಂ ಪ್ರಭೆಯಾದ ಹೆಣ್ಣುಗಳನ್ನು ಇವರ ಕತೆಗಳಲ್ಲಿ ಚಿತ್ರಿಸಿದ್ದಾರೆ.

* ಪರಂಪರೆಯಿಂದ ದೂರವಾಗಿಯೇ ಬದುಕಿದ್ದರಿಂದ ಅವರ ನೆರವು ಇಲ್ಲದೇ ನಗರದ ವಾತಾವರಣದಲ್ಲಿ ಉಮಾರಾವ್‌ರವರು ಸಂಪೂರ್ಣವಾಗಿ ತಮ್ಮ ಸ್ವಂತ ಪ್ರತಿಭೆಯಿಂದ ದುಡಿಸಿಕೊಳ್ಳುತ್ತಾರೆ. ಇವರು ಸ್ವತಃ ಸಂಪಾದನೆ ಮಾಡಿದ ಆಧುನಿಕ ಪ್ರಜ್ಞೆಯ ನಾಗರೀಕತೆಯು ಹಲವು ಹೊಸ ಅಂಶಗಳನ್ನು ಹೊತ್ತುಕೊಂಡದ್ದಾಗಿದೆ.

* ಇವರ ಕಥನ ಲೋಕದಲ್ಲಿ ಸ್ತ್ರೀಯರು ಬಲಿಷ್ಟರಷ್ಟೇ ಅಲ್ಲ. ಅಹಂಕಾರ ಮತ್ತು ವಿಕ್ಷಪ್ತತೆಯುಳ್ಳ ಪುರುಷರಿಗೆ ಹೋಲಿಸಿದರೆ ವಿವೇಕಿಗಳು, ಹೃದಯವಂತರೂ, ಪರಿಪೂರ್ಣರೂ ಹೌದು. ತಮ್ಮ ಅಸ್ಥಿತ್ವದ ಪ್ರಶ್ನೆ ಬಂದಾಗ ಹೆಣ್ಣು ತೋರುವ ದಿಟ್ಟತನ, ಜೀವನದ ಪ್ರೀತಿ ಅವರನ್ನು ಘನವೆತ್ತ ಮನುಷ್ಯರನ್ನಾಗಿ ಸೃಷ್ಟಿಸಿದ್ದಾರೆ.

ಉಮಾರಾವ್‌ರವರ ಸಮಕಾಲೀನ ಲೇಖಕಿಯರಲ್ಲಿ ಕಂಡುಬರುವ ಸ್ತ್ರೀ ವಿಮೋಚನೆ ಕುರಿತಾದ ಚಿಂತನೆಗಳನ್ನು ಮತ್ತು ಇವರ ಆಲೋಚನೆಯಲ್ಲಿ ಮೂಡಿಬರುವ ವಿಮೋಚನೆಯನ್ನು ಕುರಿತು ಚರ್ಚಿಸಿದ್ದೇನೆ. ಸ್ತ್ರೀಪರವಾದ ದನಿ ಮೂಡಿಸುತ್ತಲೇ ಮತ್ತದೇ ಪುರುಷ ನಿರ್ದೇಶಿತ ಮೌಲ್ಯಗಳಿಗೆ ತಲೆಬಾಗುವ ಲೇಖಕಿಯರು ಮತ್ತು ಅದೇರೀತಿ ತಮ್ಮ ಕತೆಗಳಲ್ಲಿ ಹೆಣ್ಣನ್ನು ಚಿತ್ರಿಸಿ ಅವಳು ಬಂಡಾಯ ಹೇಳುವ ಇವರ ಕತೆಗಳ ಬಗ್ಗೆ ಈ ಸಂಪ್ರಬಂಧದಲ್ಲಿ ಚರ್ಚಿಸಲಾಗಿದೆ.

**ಅನುಬಂಧ – ೧**

## ಮೂಲ ಪಠ್ಯಗಳು

೦೧ ಉಮಾರಾವ್ — ನೂರಸ್ವರ
ಪುಸ್ತಕ ಪ್ರಕಾಶನ, ಬಸನವಗುಡಿ
ಬೆಂಗಳೂರು–೧೯೯೯

೦೨ ಉಮಾರಾವ್ — ಅಗಸ್ತ್ಯ
ನಂದನ ಪ್ರಕಾಶನ, ಬೆಂಗಳೂರು–೧೯೮೬

೦೩ ಉಮಾರಾವ್ — ಕಡಲ ಹಾದಿ
ಗ್ರಂಥಾವಳಿ ಶ್ರೀನಗರ, ಬೆಂಗಳೂರು–೧೯೯೩

೦೪ ಉಮಾರಾವ್ — ಸಿಲೋನ್ ಸುಶೀಲಾ ಹಾವಾಡಿಗ
ಮೀಸೆ ಹೆಂಗಸು ಮತ್ತು ಇತರರು,
ನುಡಿ ಪುಸ್ತಕ, ಬೆಂಗಳೂರು–೨೦೧೦

ಅನುಬಂಧ – ೨

## ಪರಾಮರ್ಶನ ಗ್ರಂಥಗಳು


೦೧ ಅಮರೇಶ ಎನ್. ಕನ್ನಡ ಸಂಶೋಧನೆಯ ವೈಧಾನಿಕತೆಗಳು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೮

೦೨ ಆಮೂರು ಜಿ.ಎಸ್. ಅವಳ ಕಥೆಗಳು,
ಪ್ರಿಸಂ ಬುಕ್ಸ್ ಪ್ರೈ.ಲಿ. ಬೆಂಗಳೂರು–೧೯೯೯

೦೩. ಆಮೂರು ಜಿ.ಎಸ್. ಕನ್ನಡ ಕಥನ ಸಾಹಿತ್ಯ
ಶ್ರೀಹರಿ ಪ್ರಕಾಶನ, ಧಾರವಾಡ

೦೪. ಕರೀಗೌಡ ಬೀಚನಹಳ್ಳಿ ಶತಮಾನದ ಸಣ್ಣ ಕಥೆಗಳ ಸಮೀಕ್ಷೆ
ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು–೨೦೦೩

೦೫. ಕವಿತಾ ರೈ ಅರಿವಿನ ನಡೆ
ಲೋಹಿಯಾ ಪ್ರಕಾಶನ, ಬಳ್ಳಾರಿ–೨೦೦೭

೦೬. ಕೀರ್ತಿನಾಥ ಕುರ್ತಕೋಟಿ ಯುಗಧರ್ಮ ಮತ್ತು ಸಾಹಿತ್ಯ ದರ್ಶನ
ಮನೋಹರ ಗ್ರಂಥಮಾಲಾ, ಧಾರವಾಡ–೧೯೯೧

೦೭. ಗಾಯತ್ರಿ ನಾವಡ ಭಾರತೀಯ ಸ್ತ್ರೀವಾದ : ಒಂದು ಸಂಕಥನ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೦

೦೮. ಗಾಯತ್ರಿ ನಾವಡ ಮಹಿಳಾ ಸಂಕಥನ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೩

೦೯. ಗಿರಡ್ಡಿ ಗೋವಿಂದರಾಜ — ಕಲ್ಪಿತ ವಾಸ್ತವ
ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ-೨೦೦೯

೧೦. ಗಿರಡ್ಡಿ ಗೋವಿಂದರಾಜ — ಸಣ್ಣಕಥೆ ಸಾಹಿತ್ಯ ಭಂಡಾರ
ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ-೨೦೦೯

೧೧. ತೇಜಸ್ವಿನಿ ನಿರಂಜನ (ಸಂ) — ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
ಸೀಮಂತಿನಿ ನಿರಂಜನ (ಸಂ) — ಕನ್ನಡ ಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು೧೯೯೪

೧೨. ನರಹಳ್ಳಿ ಬಾಲಸುಬ್ರಹ್ಮಣ್ಯ — ಸಾಹಿತ್ಯ ಸಂಸ್ಕೃತಿ
ಅಂಕಿತ ಪ್ರಕಾಶನ, ಬೆಂಗಳೂರು-೧೯೯೮

೧೩. ನಾಗರಾಜ ಡಿ.ಆರ್. — ಸಾಹಿತ್ಯ ಕಥನ
ಅಕ್ಷರ ಪ್ರಕಾಶನ, ಹೆಗ್ಗೋಡು-೧೯೯೫

೧೪. ನಿರೂಪಮ (ಸಂ) — ಕರ್ನಾಟಕದ ಕವಿಯತ್ರಿಯರು
ಪ್ರಕಾಶಕರು, ರಿ.ನಂ. ೧೫, ರಾಜಾಜಿನಗರ, ಬೆಂಗಳೂರು

೧೫. ಬರಗೂರು ರಾಮಚಂದ್ರಪ್ಪ — ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ,
ಪ್ರಧಾನ ಸಂಪಾದಕರು, ವಿವಿಧ ಲೇಖಕರು, ಕನ್ನಡ
ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೬. ಮಂಗಳಾ ಪ್ರಿಯದರ್ಶಿನಿ — ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು
ಪ್ರವೇಶಿಕೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ
ವಿಶ್ವವಿದ್ಯಾಲಯ, ಹಂಪಿ-೨೦೦೭

೧೭. ಮಲ್ಲಿಕಾ ಘಂಟಿ — ಕನ್ನಡ ಸಾಹಿತ್ಯ ಮತ್ತು ಮಹಿಳೆ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೮. ರಹಮತ್ ತರೀಕೆರೆ — ಚಿಂತನೆಯ ಪಾಡು
ಅಂಕಿತ ಪ್ರಕಾಶನ, ಬೆಂಗಳೂರು-೨೦೧೦

೧೯. ರಾಮಚಂದ್ರ ಸಿ.ಎನ್. — ಸಾಹಿತ್ಯ ವಿಮರ್ಶೆ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨೦೦೦

೨೦. ವೆಂಕಟಲಕ್ಷ್ಮೀ ಬಿ.ಎಎಸ್. — ಕನ್ನಡ ಲೇಖಕಿಯರ ನೆಲೆ-ಬೆಲೆ
ಎನ್.ಟಿ. ಶ್ಯಾಮ ಪ್ರಕಾಶನ ಇಂದಿರಾ ನಗರ,
ಬೆಂಗಳೂರು-೧೯೯೪

೨೧. ಶ್ರೀಮತಿ ಎಚ್.ಎಸ್. — ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೬

೨೨. ಶ್ರೀಮತಿ ಎಚ್.ಎಸ್. — ಚಹರೆ
ಇಳಾ ಪ್ರಕಾಶನ, ಬೆಂಗಳೂರು

೨೩. ಶ್ರೀಮತಿ ಆರ್ಯಾಂಬ ಪಟ್ಟಾಬಿ — ಮಹಿಳಾ ಸಾಹಿತ್ಯ ಸಮೀಕ್ಷೆ
ಸಂವಹನ ಪ್ರಕಾಶನ, ಮೈಸೂರು-೨೦೦೪

೨೪. ಶೇಷಗಿರಿರಾವ್ ಎಲ್.ಎಸ್. — ಹೊಸಗನ್ನಡ ಸಾಹಿತ್ಯ ಚರಿತ್ರೆ
ಅಂಕಿತ ಪ್ರಕಾಶನ, ಬೆಂಗಳೂರು-೨೦೦೨

೨೫. ಸಬಿಹಾ ಭೂಮಿಗೌಡ — ಮಹಿಳಾ ಸಾಹಿತ್ಯ
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೬. ಸಿಮೋನ್ ದ ಬುವಾ (ಅನು) ಶ್ರೀಮತಿ ಎಚ್.ಎಸ್. — ದ ಸೆಕೆಂಡ್ ಸೆಕ್ಸ್
ಅಧ್ಯಯನ ಮಂಡಲ, ಬೆಂಗಳೂರು-೨೦೦೭